# ನಮ್ಮ ಮಾನಸ

ಸಂಪುಟ : 3 ಆಗಸ್ಟ್ 2009 ಸಂಚಿಕೆ : 4

ಸ್ವರ್ಗ ಬೇಕೆಂದೇನೂ ನಾನು ಕೇಳುತ್ತಿಲ್ಲ,
ನರಕ ಬೇಡ ಎಂದಷ್ಟೇ ನಾನು
ಒದ್ದಾಡುತ್ತಿರುವುದು; ನನ್ನಂತೆಯೇ
ಇರುವ ಇತರ ಹಿಜಡಾಗಳಿಗಾಗಿಯೂ!



# ಸಾಹಿತ್ಯ ಅಕಾದೆಮಿ

ಸೆಂಟ್ರಲ್ ಕಾಲೇಜ್ ಆವರಣ, ಡಾ. ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು-560 001.

ದೂರವಾಣಿ: 22245152 / 22121932

## ಸಾಹಿತ್ಯ ಅಕಾದೆಮಿ ಪ್ರಶಸ್ತಿ ವಿಜೇತ ಕೃತಿಗಳು



**ಸುಂದರಿಯರು ಸುಂದರರು**
ಲೇ: ಉರೂಬ್
ಅನುವಾದ: ಮೋಹನ್ ಕುಂಟಾರ್
ಬೆಲೆ : ರೂ. 250/-



**ನೆಲವೆದ್ದು ಬಡಿಯಿತು**
ಲೇ: ವಿಶ್ವಾಸ ಪಾಟೀಲ
ಅನುವಾದ: ಚಂದ್ರಕಾಂತ ಪೋಕಳೆ
ಬೆಲೆ : ರೂ. 350/-



**ಒಂದು ಗಿಡ ಮತ್ತು ಎರಡು ಹಕ್ಕಿಗಳು**
ಲೇ: ವಿಶ್ರಾಮ ಬೇಡಕರ
ಅನುವಾದ:
ಕುಮುದಿನಿ ಅಶೋಕ ಭೈರಣ್ಣನವರ
ಬೆಲೆ : ರೂ. 250/-



**ಗೋಡೆಯಲ್ಲಿ ಒಂದು ಕಿಟಕಿ ಇರುತ್ತಿತ್ತು**
ಲೇ: ವಿನೋದ್ ಕುಮಾರ ಶುಕ್ಲ
ಅನುವಾದ: ತೇಜಸ್ವಿ ಕಟ್ಟೀಮನಿ
ಬೆಲೆ : ರೂ. 100/-



**ಕತೆಗಳು**
ಲೇ: ಕೇತು ವಿಶ್ವನಾಥರೆಡ್ಡಿ
ಅನುವಾದ: ಮೀರಾಸಾಬಿಹಳ್ಳಿ ಶಿವಣ್ಣ
ಬೆಲೆ : ರೂ. 120/-

## ಭಾರತೀಯ ಸಾಹಿತ್ಯ ನಿರ್ಮಾಣಕಾರರು



**ರಾಷ್ಟ್ರಕವಿ ಕುವೆಂಪು**
ಲೇ: ಪ್ರಭುಶಂಕರ
ಬೆಲೆ: ರೂ. 40/-



**ತ.ರಾ.ಸು.**
ಲೇ: ಎಂ.ಎಸ್. ಪಾಟೀಲ
ಬೆಲೆ ರೂ. 40/-



**ಸ್ವಾಮಿ ವಿವೇಕಾನಂದ**
ಲೇ: ನೆಮಾಯಿ ಸದನ್ ಬೋಸ್
ಬೆಲೆ: ರೂ. 40/-



**ಆರ್. ಕಲ್ಯಾಣಮ್ಮ**
ಲೇ: ಎಸ್. ಡಿ. ಶಶಿಕಲಾ
ಬೆಲೆ: ರೂ. 40/-



**ಕನುಪರ್ತಿ ವರಲಕ್ಷ್ಮಮ್ಮ**
ಲೇ: ಪೋಲಾಪ್ರಗಡ ರಾಜ್ಯಲಕ್ಷ್ಮಿ
ಬೆಲೆ: ರೂ. 40/-

ನಮ್ಮ ಮಾನಸ

ಆಗಸ್ಟ್ 2009

ಸಂಪುಟ : 3 ಸಂಚಿಕೆ : 4

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*

*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್., ಸವಿತಾ ಎ.**
**ವೆಂ. ವನಜಾ, ಗೀತಾ, ಎಚ್.ಎಸ್. ಪುಷ್ಪಾ.**

*ಸಲಹೆ – ಸಹಕಾರ*
**ಇಳಾ ವಿಜಯಾ, ಸುಮಿತ್ರಾಬಾಯಿ ಬಿ.ಎನ್.**

*ಮಾನಸ ಬಳಗ*
**ತಸ್ನೀಂ ತಾಜ್, ವೇದವಲ್ಲಿ ಜಿ.ವಿ.**
**ವತ್ಸಲ ವೈ.ಎಸ್., ಶ್ಯಾಮಲ, ತಾಜುಮಾ**

*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8–00 ರೂ.** |
| **ವಾರ್ಷಿಕ ಚಂದಾ** | **100–00 ರೂ.** |
| (ವಿಶೇಷ ಸಂಚಿಕೆಯೊಂದಿಗೆ) | |
| **ಸಂಸ್ಥೆಗಳಿಗೆ** | **150–00 ರೂ.** |

ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***
**ವೆಂ. ವನಜ**
*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**





# ಸಮಾಜದಲ್ಲಿ ಸಮಾನ ಅವಕಾಶಗಳು ಸಿಗುವಂತಾಗಬೇಕು

ನಮ್ಮ ಸಮಾಜದಲ್ಲಿ ಗಂಡು–ಹೆಣ್ಣಿನ ನಡುವಿರುವ ಲೈಂಗಿಕ ಸಂಬಂಧವೇ ಸಹಜವಾದ ಹಾಗೂ ನೈಸರ್ಗಿಕವಾದ ಸಂಬಂಧವೆಂಬುದು ಬಹುಸಂಖ್ಯಾತರಲ್ಲಿರುವ ನಂಬಿಕೆಯಾಗಿದೆ. ಈ ಸಹಜವಾದ ಸಂಬಂಧ, ವಿವಾಹ, ಕುಟುಂಬದ ಸುತ್ತ ಹಲವಾರು ಸಾಂಸ್ಕೃತಿಕ, ಸಾಮಾಜಿಕ ಹಾಗೂ ಧಾರ್ಮಿಕ ಮೌಲ್ಯಗಳು, ಪರಿಕಲ್ಪನೆಗಳು ಸನಾತನ ಕಾಲದಿಂದಲೂ ಪ್ರಚಲಿತದಲ್ಲಿವೆ. ಈ ನಂಬಿಕೆಯನ್ನು ಪುನರ್‌ಪರಿಶೀಲಿಸುವ, ಪುನರ್ ವ್ಯಾಖ್ಯಾನಿಸುವ ಜರೂರನ್ನು ಲೈಂಗಿಕ ಅಲ್ಪಸಂಖ್ಯಾತರ ಸಂಘಟಿತ ಹೋರಾಟ ಇಂದು ನಮ್ಮ ಮುಂದಿಟ್ಟಿದೆ.

ಲೈಂಗಿಕತೆ, ಸಂಬಂಧಪಟ್ಟಂತೆ ಲೈಂಗಿಕ ಅಲ್ಪಸಂಖ್ಯಾತರು ಎತ್ತುತ್ತಿರುವ ಪ್ರಶ್ನೆಗಳು ಸಾಂಪ್ರದಾಯಿಕ ಲೈಂಗಿಕ ಅಭಿವ್ಯಕ್ತಿಯ ಹಿಂದಿರುವ ಸನಾತನ ಧೋರಣೆಗಳನ್ನು, ಮೌಲ್ಯಗಳನ್ನು ಪ್ರಶ್ನಿಸುತ್ತವೆ. ಸಹಜವಾಗಿ ನೈಸರ್ಗಿಕ ಸಂಬಂಧವೆಂದರೇನು? ಹಿಜಡಾಗಳು, ದ್ವಿಲಿಂಗಿಗಳು, ಪುರುಷ–ಪುರುಷರ ನಡುವೆ, ಮಹಿಳೆ–ಮಹಿಳೆಯರ ನಡುವಿನ ಲೈಂಗಿಕ ಸಂಬಂಧಗಳು ನಮ್ಮ ಸಂಸ್ಕೃತಿಯ ಇತಿಹಾಸದಲ್ಲಿ ಇಲ್ಲವೆ? ಇದು ಸಹಜ ಹಾಗೂ ನೈಸರ್ಗಿಕವಾದುದಲ್ಲವೆ? ಇಂತಹ ಲೈಂಗಿಕ ಅಭಿವ್ಯಕ್ತಿಯನ್ನು ಬಹುಸಂಖ್ಯಾತರ ಸಾಂಸ್ಕೃತಿಕ ಮೌಲ್ಯಗಳ ನೈತಿಕತೆಯ ಹಿನ್ನೆಲೆಯಲ್ಲಿ ಮರೆ ಮಾಚುವುದೇಕೆ ಎಂಬುದು ಲೈಂಗಿಕ ಅಲ್ಪಸಂಖ್ಯಾತರ ಸವಾಲು.

ಸನಾತನ ಸಂಸ್ಕೃತಿಯಲ್ಲಿ ಹಿಜಡಾಗಳಿಗೆ ಸಮಾಜದಲ್ಲಿ ಮನ್ನಣೆ, ಗೌರವ ಆದರ್ಶಗಳಿದ್ದವು. ಅವರನ್ನು ಶುಭ ಕಾರ್ಯಗಳಿಗೆ ಆಹ್ವಾನಿಸುತ್ತಿದ್ದರು. ಕ್ರಮೇಣ ಅವರ ಬಗ್ಗೆ ಇರುವ ಧೋರಣೆಗಳು ಬದಲಾಗುತ್ತಾ ಬಂದವು. ಇಂದು ಹೀಯಾಳಿಸುವ, ಅವಮಾನಿಸುವ, ಅಪಹಾಸ್ಯಕ್ಕೊಳಗಾಗುವ ಗುಂಪುಗಳಾಗಿ ಇಂದು ಪರಿಗಣಿಸಲ್ಪಟ್ಟಿದ್ದಾರೆ. ಅವರ ದೈಹಿಕ ವ್ಯತ್ಯಾಸಗಳನ್ನು ಲೈಂಗಿಕ ಅಭಿವ್ಯಕ್ತಿಯನ್ನು ವಿಕೃತ ನಡುವಳಿಕೆಯೆಂದು, ರೋಗಗ್ರಸ್ಥರೆಂದು, 'ವಿಕಲಾಂಗಿ'ಗಳೆಂದು ಕರೆಯಲಾಗುತ್ತದೆ. ಸಮಾಜದ ಸ್ವಾಸ್ಥ್ಯವನ್ನು ಕಾಪಾಡಬೇಕೆಂದರೆ ಈ ರೋಗಕ್ಕೆ ಚಿಕಿತ್ಸೆ ನೀಡಬೇಕೆಂಬುದು ಸಂಪ್ರದಾಯಸ್ಥ ಬಹುಸಂಖ್ಯಾತರ ನಿಲುವು. ಈ ಪೂರ್ವಾಗ್ರಹಪೀಡಿತ ನೋಟದಿಂದಾಗಿ ಲೈಂಗಿಕ ಅಲ್ಪಸಂಖ್ಯಾತರು ಮೂಲಭೂತ ಸೌಕರ್ಯಗಳಿಂದ ಸಂಪೂರ್ಣವಾಗಿ ವಂಚಿತವಾಗಿ ಬೀದಿಯ ಬದಿಯಲ್ಲಿ ಬದುಕುವ ಜೀವಿಗಳಾಗಿದ್ದಾರೆ. ಅಲ್ಲಿಯೂ ರಕ್ಷಣೆಯಿಲ್ಲ, ಅವರ ಬದುಕು ಅತಂತ್ರವಾಗಿದೆ.

ಇಂದು ಲೈಂಗಿಕ ಅಲ್ಪಸಂಖ್ಯಾತರು ತಮ್ಮ ಹಕ್ಕುಬಾಧ್ಯತೆಗಾಗಿ ಸಂಘಟಿತರಾಗುತ್ತಿದ್ದಾರೆ. ಹಲವಾರು ದೇಶಗಳಲ್ಲಿ ಅವರ ಅಸ್ತಿತ್ವವನ್ನು ಗುರುತಿಸಿ ಕಾನೂನಿನ ರಕ್ಷಣೆ ನೀಡಿ, ಅವರ ಬದುಕಿಗೆ ಘನತೆಯನ್ನು ನೀಡಲಾಗಿದೆ. ಅವರ ಬೇಡಿಕೆಗೆ ಮನ್ನಣೆ ನೀಡುವುದರ ಜೊತೆಯಲ್ಲಿ ಸಹಜ, ನೈಸರ್ಗಿಕ ಲೈಂಗಿಕ ಪರಿಕಲ್ಪನೆಯನ್ನು ಪುನರ್ ವ್ಯಾಖ್ಯಾನಿಸಲಾಗಿದೆ. ಭಾರತದಲ್ಲಿ ೧೮೬೦ರಲ್ಲಿ ಲಾರ್ಡ್ ಮೆಕಾಲೆಯು ಸೆಕ್ಷನ್ ೩೭೭ ಜಾರಿಗೆ ತಂದು ಪ್ರಕೃತಿ ಸಹಜವಾದುದಕ್ಕೆ ವಿರುದ್ಧವಾದ ಯಾವುದೇ ಲೈಂಗಿಕ ಕ್ರಿಯೆ ಕ್ರಿಮಿನಲ್ ಅಪರಾಧವೆಂದು ಪರಿಗಣಿಸಿದ್ದರು. ಇದು ೧೪೮ ವರ್ಷಗಳ ಹಿಂದಿನ ಕಾನೂನು. ಲೈಂಗಿಕ ಅಲ್ಪಸಂಖ್ಯಾತರನ್ನು ಈ ಕಾನೂನಿನಡಿಯಲ್ಲಿ ಅಪರಾಧಿಗಳೆಂದು ಪರಿಗಣಿಸಿ ೧೦ ವರ್ಷ ಜೈಲುಶಿಕ್ಷೆ ನೀಡಲಾಗುತ್ತದೆ. ಕಾನೂನು ಬಾಹಿರವಾಗಿ ಬಂಧಿಸುವುದು, ದೈಹಿಕವಾಗಿ ಚಿತ್ರಹಿಂಸೆಯನ್ನು ನೀಡುವುದು, ಅವಾಚ್ಯವಾಗಿ ನಿಂದಿಸುವುದು ಅವರು ದೈನಂದಿನ ಜೀವನದಲ್ಲಿ ಅನುಭವಿಸಲೇಬೇಕಾದ ಸಂಕಟಗಳಾಗಿವೆ.

೧೮೬೦ರ ಈ ಅಮಾನುಷ ಕಾನೂನಿನ ವಿರುದ್ಧ ಲೈಂಗಿಕ ಅಲ್ಪಸಂಖ್ಯಾತರು ತಮ್ಮ ಪ್ರತಿಭಟನೆಯ ಧ್ವನಿಯನ್ನು ಎತ್ತುತ್ತಲೇ ಬಂದಿದ್ದಾರೆ. ತಮಗೂ ಸಂವಿಧಾನಾತ್ಮಕ ಹಕ್ಕುಗಳಿವೆಯೆಂದೂ ಸ್ವಾತಂತ್ರ್ಯ ಮೂಲಭೂತವಾದ ಹಕ್ಕೆಂದೂ ವಾದಿಸುತ್ತಲೇ ಬಂದಿದ್ದಾರೆ. ತಮ್ಮ ಲೈಂಗಿಕ ಅಭಿವ್ಯಕ್ತಿ ಕಾನೂನು ಬದ್ಧವಾದ, ಹಾಗೂ ಖಾಸಗಿಯಾದ ಹಕ್ಕೆಂಬ ಬೇಡಿಕೆಯನ್ನು ಮುಂದಿಟ್ಟುಕೊಂಡು ೧೯೯೪ ರಿಂದಲೂ ನಿರಂತರವಾಗಿ ಸಂಘಟಿತರಾಗುತ್ತಾ ಬಂದಿದ್ದಾರೆ. ಇವರ ಸಂಘಟಿತ ಹೋರಾಟದ ಫಲವಾಗಿ ಆರ್ಟಿಕಲ್ ೩೭೭ ಹೇಳಿರುವಂತೆ **ಲೈಂಗಿಕ ಅಲ್ಪಸಂಖ್ಯಾತರ ಲೈಂಗಿಕ ಅಭಿವ್ಯಕ್ತಿ ಕ್ರಿಮಿನಲ್**

ಒಳಗಿನ ಪುಟಗಳಲ್ಲಿ....



ಅಪರಾಧವಲ್ಲ ಎಂದು ದೆಹಲಿಯ ಉಚ್ಚನ್ಯಾಯಾಲಯ ತೀರ್ಪು ನೀಡಿದೆ. ಈ ತೀರ್ಪು ಇವರ ಬದುಕಿನಲ್ಲೊಂದು ಹೊಸ ಅಧ್ಯಾಯವನ್ನು ಪ್ರಾರಂಭಿಸಿದೆ. ಬಹುಸಂಖ್ಯಾತ, ನೈತಿಕ ಮೌಲ್ಯ, ಅಸಹನೆ, ಸಿಟ್ಟು, ಸಮರ್ಥನೆ ಮುಂತಾದ ಕಾರಣಗಳಿಂದಾಗಿ ವೈಯಕ್ತಿಕ ಹಕ್ಕು ಬಾಧ್ಯತೆಗಳನ್ನು ತಳ್ಳಿಹಾಕಲು ಸಾಧ್ಯವಿಲ್ಲ ಎಂಬ ನ್ಯಾಯಾಲಯದ ಅಭಿಪ್ರಾಯ ಗಮನಾರ್ಹವಾಗಿದೆ.

ನ್ಯಾಯಾಲಯ ನೀಡಿದ ಈ ತೀರ್ಪು ಬಹುಸಂಖ್ಯಾತ ಸಾಮಾನ್ಯ ಜನರಲ್ಲಿ ಹಾಗೂ ವಿವಿಧ ಧಾರ್ಮಿಕ ಮುಖಂಡರಲ್ಲಿ ತೀವ್ರ ಅಸಹನೆ ಹಾಗೂ ಅಸಮಾಧಾನವನ್ನು ಹುಟ್ಟು ಹಾಕಿದೆ. ಈ ತೀರ್ಪಿನಿಂದ ಕುಟುಂಬ, ಸಂಸ್ಕೃತಿ, ನೈತಿಕ ಮೌಲ್ಯಗಳು ನಾಶವಾಗುತ್ತವೆ ಎಂದು ಆರೋಪಿಸಲಾಗಿದೆ. ವಿವಾಹ, ಕುಟುಂಬವನ್ನು ಕಾಪಾಡುವ ಸಂಸ್ಕೃತಿರಕ್ಷಣೆಯ ವಿಷಯದಲ್ಲಿ ಎಲ್ಲಾ ಧಾರ್ಮಿಕ ಮುಖಂಡರೂ ಒಂದಾಗಿರುವುದು ಕುತೂಹಲಕಾರಿಯಾಗಿದೆ. ಧಾರ್ಮಿಕ ಹಾಗೂ ಸಾಂಸ್ಕೃತಿಕ ಭಿನ್ನತೆಗಳಿದ್ದರೂ ಕುಟುಂಬ, ವಿವಾಹ ಹಾಗೂ ಲೈಂಗಿಕ ಅಭಿವ್ಯಕ್ತಿಗಳಂಥ ವಿಷಯದಲ್ಲಿ ಎಷ್ಟು ಸುಲಭವಾಗಿ ಮೌಲ್ಯಗಳು ಒಂದಾಗಿ ಬಿಡುತ್ತವೆ! ಕೆಲವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ "ಇದಕ್ಕೆ ಅವಕಾಶ ನೀಡಿದರೆ, ನಾಳೆ ಪ್ರಾಣಿಗಳೊಂದಿಗೂ ಲೈಂಗಿಕ ಸಂಬಂಧಕ್ಕೆ ಅವಕಾಶ ನೀಡಿ" ಎಂದು ಕೇಳಬಹುದೆಂದು ಆರೋಪಿಸುತ್ತಾರೆ. ಇನ್ನು ಕೆಲವರು "ಇದು ಕೊಳಕು ಪಾಶ್ಚಾತ್ಯ ಸಂಸ್ಕೃತಿಯ ಅಂಧಾನುಕರಣೆ" ಎನ್ನುತ್ತಾರೆ. ನಮ್ಮ ಸಮಾಜದಲ್ಲಿ ಈ ರೀತಿಯ ಸಂಬಂಧಗಳು ಗುಪ್ತವಾಗಿ ಅಸ್ತಿತ್ವದಲ್ಲಿ ಇದ್ದೇ ಇವೆ. ಇದು ಅಸಹಜವಾದದ್ದು ಅಲ್ಲ, ಅನಾರೋಗ್ಯಕರವಾದದ್ದೂ ಅಲ್ಲ. ಕಾನೂನಿನ ಮೂಲಕ ಇದನ್ನು ಅಧಿಕೃತಗೊಳಿಸಿ ಅಂಥವರ ವ್ಯಕ್ತಿತ್ವಕ್ಕೆ ಹಾಗೂ ಖಾಸಗೀ ಬದುಕಿಗೆ ಮನ್ನಣೆ ನೀಡಲಾಗಿದೆಯೆಂದು ಲೈಂಗಿಕ ಅಲ್ಪಸಂಖ್ಯಾತರು ಇದನ್ನು ಸ್ವಾಗತಿಸುತ್ತಾರೆ.

ದೆಹಲಿ ನ್ಯಾಯಾಲಯ ನೀಡಿದ ತೀರ್ಪಿನ ಬಗ್ಗೆಯು ಕೆಲವು ಅಸಮಾಧಾನ ಹಾಗೂ ಭಿನ್ನಾಭಿಪ್ರಾಯಗಳಿವೆ. ಇದು ಮೊದಲನೆಯದಾಗಿ ದೆಹಲಿಯ ನ್ಯಾಯಾಲಯದ ವ್ಯಾಪ್ತಿಗೆ ಸೀಮಿತವಾಗುತ್ತದೆ. ಈ ತೀರ್ಪು ಹೆಣ್ಣೂ ಅಲ್ಲದ, ಗಂಡೂ ಅಲ್ಲದ ಮೂರನೇ ಅಂಗವಾದ ಹಿಜಡಾಗಳಿಗೆ ಯಾವುದೇ ರಕ್ಷಣೆಯನ್ನು ನೀಡುವುದಿಲ್ಲ. 'ಖಾಸಗಿ' ಎಂದರೇನು ಎಂಬುದರಲ್ಲಿಯೂ ಸಹ ಗೊಂದಲಗಳು ಇವೆ. ಏಕೆಂದರೆ ಲೈಂಗಿಕ ಅಲ್ಪಸಂಖ್ಯಾತರು ಸಾಮಾನ್ಯವಾಗಿ ಲೈಂಗಿಕ ಕಾರ್ಯಕರ್ತರಾಗಿರುತ್ತಾರೆ. ಪೊಲೀಸರು ಈಗಿರುವ ತಮ್ಮ ಅಧಿಕಾರವನ್ನು ಉಪಯೋಗಿಸಿ ಕೊಂಡು ಅವರನ್ನು ಹಿಂಸಿಸಲು ಅವಕಾಶವಿದೆ. ಎಳೆಯ ಮಕ್ಕಳನ್ನು ಲೈಂಗಿಕವಾಗಿ ದುರುಪಯೋಗ ಪಡಿಸಿಕೊಳ್ಳುವುದು ಸಹ ಈ ಸೆಕ್ಷನ್ ವ್ಯಾಪ್ತಿಗೆ ಬರುವುದರಿಂದ ಇದನ್ನು ಪಡೆಯಲು ಪ್ರತ್ಯೇಕ ಕಾಯಿದೆಯನ್ನು ಜಾರಿಗೆ ತರಬೇಕೆಂಬ ಬೇಡಿಕೆಯು ಕೇಳಿ ಬರುತ್ತಿದೆ. ಎಚ್.ಐ.ವಿ. ಯಂತಹ ಕಾಯಿಲೆಗಳಿಗೆ ಲೈಂಗಿಕ ಅಲ್ಪಸಂಖ್ಯಾತರು ಸುಲಭವಾಗಿ ತುತ್ತಾಗುವುದು ಹಾಗೂ ಕಾಯಿಲೆಯನ್ನು ಹೆಚ್ಚು ಹರಡುವ ಸಾಧ್ಯತೆಗಳಿರುವದರಿಂದ ಈ ಬಗ್ಗೆಯೂ ವಿಸ್ತೃತವಾದ ಚರ್ಚೆ ನಡೆಯ ಬೇಕಾಗುತ್ತದೆ.

ಲೈಂಗಿಕ ಅಲ್ಪಸಂಖ್ಯಾತರ ಲೈಂಗಿಕ ಅಭಿವ್ಯಕ್ತಿಯನ್ನು ಹಾಗೂ ಅವರ ಬೇಡಿಕೆಗಳನ್ನು ಉದಾರ ಮನಸ್ಸಿನ ಹೊಸದೃಷ್ಟಿಕೋನದಿಂದ ನೋಡಬೇಕಾಗುತ್ತದೆ. ಸಮಾಜ ಮಡಿವಂತಿಕೆಯನ್ನು ಬಿಡಬೇಕು. ಕೇವಲ ಕಾನೂನಿನ ಮೂಲಕ ಅವರ ಬದುಕಿನಲ್ಲಿ ಸಂಪೂರ್ಣ ಬದಲಾವಣೆಯನ್ನು ತರಲು ಸಾಧ್ಯವಿಲ್ಲ. ಆರೋಗ್ಯ, ವಿದ್ಯಾಭ್ಯಾಸ, ಕೆಲಸ ಮುಂತಾದ ಮೂಲಭೂತ ಅವಶ್ಯಕತೆಗಳೂ ಅವರಿಗೆ ದೊರೆಯಬೇಕಿದೆ. ಸಮಾಜದ ಮುಖ್ಯವಾಹಿನಿಯಲ್ಲಿ ಅವರೂ ಬೆರೆತು ಘನತೆಯಿಂದ ಬದುಕುವ ಅವಕಾಶವನ್ನು ಕಲ್ಪಿಸಿಕೊಡಬೇಕಾದುದು ನಮ್ಮೆಲ್ಲರ ಕರ್ತವ್ಯ.

* * *

ಪದ್ಮಭೂಷಣ ಬಿ. ಸರೋಜಾದೇವಿಯವರು ಮಗಳು ಶ್ರೀಮತಿ ಭುವನೇಶ್ವರಿ ಅವರ ನೆನಪಿನಲ್ಲಿ ಸಾಹಿತ್ಯ ಪರಿಷತ್ತಿನ ಮೂಲಕ ಕೊಡಮಾಡುವ ಸಾಹಿತ್ಯ ಪ್ರಶಸ್ತಿಯು ಈ ಸಾಲಿನಲ್ಲಿ ಖ್ಯಾತ ಲೇಖಕಿ ಶ್ರೀಮತಿ ಆರ್ಯಾಂಬ ಪಟ್ಟಾಭಿ ಅವರಿಗೆ ಸಂದಿದೆ. ಲೇಖಕಿಗೆ 'ನಮ್ಮ ಮಾನಸ'ದ ಅಭಿನಂದನೆಗಳು.

* * *

ಕಿರಾನಾ ಘರಾನೆಯಲ್ಲಿ ವಿಶೇಷ ಪಾಂಡಿತ್ಯವಿದ್ದ ಅಪೂರ್ವ ಗಾಯಕಿ ಗಂಗೂಬಾಯಿ ಹಾನಗಲ್, ತಮ್ಮ ಶ್ರೇಷ್ಠ ಗಾಯನದ ಜೊತೆಗೆ ಇನ್ನಿತರ ಸಾಂಸ್ಕೃತಿಕ ವಲಯಗಳಲ್ಲೂ ವಿಶೇಷ ಆಸ್ಥೆ ಇದ್ದವರು; ಕಲೆ-ಕಲಾವಿದರನ್ನು ಪೋಷಿಸಿದರು. ಅಂಥ ಅಪ್ರತಿಮ ಸಾಧಕಿಯನ್ನು ಕಳೆದುಕೊಂಡೆವು. ದುಃಖತಪ್ತ ಹೃದಯದಿಂದ ಅವರ ಆತ್ಮಕ್ಕೆ ಶಾಂತಿ ಕೋರುತ್ತೇವೆ.

❑


ಲಿವಿಂಗ್ ಸ್ಮೈಲ್ ವಿದ್ಯಾ

# ನಾನು ಅವನಲ್ಲ...... ಅವಳು....!




● *ಚಂಪಾವತಿ ಎಚ್.ಎಸ್.*

**ತ**ಮಿಳಿನಲ್ಲಿ ಲಿವಿಂಗ್ ಸ್ಮೈಲ್ ವಿದ್ಯಾ ಬರೆದಿರುವ 'ನಾನು ಅವನಲ್ಲ.... ಅವಳು' ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿದವರು ಡಾ॥ ತಮಿಳ್ ಸೆಲ್ವಿ. ಈ ಪುಸ್ತಕವನ್ನು ಓದಿದಾಗ ಒಮ್ಮೆ ಮೈಯೆಲ್ಲಾ ಅದುರುವ ಹಾಗಾಗಿ ನನ್ನ ಮನಸ್ಸಿನ ಮೂಲೆಯನ್ನು ತಡಕಾಡುವಂತಹ 'ಶಾಕ್' ಆದ ಅನುಭವವೊಂದು ನನ್ನನ್ನು ಆವರಿಸಿಕೊಂಡಿತ್ತು. ನನ್ನ ಸ್ತ್ರೀವಾದಿ ಕಣ್ಣುಗಳು, ಸ್ತ್ರೀವಾದಿ ನೋಟ ಈ ಪುಸ್ತಕದ ಅವನು ಅವಳಾಗುವ ಅನುಭವದ ಪರಿಧಿಯನ್ನು ಜೀವನದ ಸೆಲೆಯನ್ನು ಅಂತರ್ಯದ ಒತ್ತಡಗಳನ್ನು, ತಹತಹಿಕೆಗಳನ್ನು ಜೀರ್ಣಿಸಿಕೊಳ್ಳಲು ಯತ್ನಿಸುತ್ತಲೇ ಇವೆ. ನೇರ ಧ್ವನಿಯಲ್ಲಿ, ಬಳುಕು ನಡಿಗೆಯಲ್ಲಿ, ಮೂಡಿದ್ದರೂ ಮೂಡದಂತಿದ್ದ ಮೀಸೆಯ ಎಳೆಯ ಮುಖದ, ಭರತನಾಟ್ಯವನ್ನು ಅತ್ಯಂತ ಶ್ರದ್ಧೆಯಿಂದ ಮಾಡುತ್ತಿದ್ದ ನನ್ನ ವಿದ್ಯಾರ್ಥಿ ರಂಗನಾಥನ ಮುಖವೊಮ್ಮೆ ಕಣ್ಣೆದುರಿಗೆ ಸುಳಿಯುತ್ತಿದೆ. ಅಂತರ್ಯದಲ್ಲಿ ಮತ್ತೊಮ್ಮೆ ನೋವಿನ ಎಳೆ.

'ಮೇಡಂ, ಬನ್ನಿ, ನೋಡಿ ನನ್ನ ತರಗತಿಯ ಹುಡುಗರೆಲ್ಲ ನನ್ನನ್ನು ಒಂಬತ್ತು, ಚಕ್ಕ, ಚನ್ನಪಟ್ಟಣ ಎಂದೆಲ್ಲಾ ಕರೆಯುತ್ತಿದ್ದಾರೆ. Please ನೋಡಿ ಮೇಡಂ.'

ಹುಡುಗರಿಗೆ ಗದರಿದ್ದೆ. ಯಾವನಾದ್ರು ರಂಗನಾಥನ ಸುದ್ದಿಗೆ ಹೋದ್ರೆ, ತಮಾಷೆ ಮಾಡಿದ್ರೆ ಶಿಕ್ಷೆ ಕೊಡ್ತೀನಿ ಅಂತ ಹೆದರಿಸಿದ್ದೆ. ರಂಗನಾಥ ಅಥವಾ ಅಂತಹವರನ್ನು ನೋಡಿದಾಗ 'ನಾರ್ಮಲ್' ಎನಿಸಿಕೊಂಡ ಪಡ್ಡೆ ಹುಡುಗರಲ್ಲಿ, ಹುಡುಗಿಯರಲ್ಲಿ ಕಂಡೂ ಕಾಣದ ನಗು, ಅಪಹಾಸ್ಯ, ಕಣ್ಣುಗಳಲ್ಲಿನ ತುಂಟತನ ಕಾಣುತ್ತದೆ. ಇವುಗಳು ಎದೆಯಾಳದ ನೋವನ್ನು ಹೆಚ್ಚಿಸುತ್ತವೆ. ಡ್ಯಾನ್ಸ್ ಕಾರ್ಯಕ್ರಮದಲ್ಲಿ ಯಾವಾಗಲೂ ತೊಡಗಿಸಿಕೊಂಡೇ ಇರುತ್ತಿದ್ದ. ರಂಗನಾಥ ಇತ್ತೀಚೆಗೆ ಸಿಕ್ಕಾಗ ತಾನು ಪುಣೆಯಲ್ಲಿ ಇದ್ದೇನೆ ಎಂದಿದ್ದ. ಪುಣೆಗೆ ಯಾಕೆ ಈತ ಹೋಗುತ್ತಾನೆ? ಪುಣೆಯಲ್ಲಿ ಇವನಿಗೆ ಯಾವ ನಂಟು ಎಂಬ ಸಂದೇಹದ ಸುಳಿಯೊಂದು ನನ್ನ ಮನದಲ್ಲಿ ಹಾದು ಹೋಗಿತ್ತು.

***"ಅಪ್ಪಾ...... ನೋಡಪ್ಪಾ ಕತ್ತರಿಸಿ ಬಿದ್ದಿರುವ ನನ್ನ ದೇಹದ ಭಾಗವನ್ನು ನೋಡು, ಇದು ಇನ್ನು ಕೇವಲ ಹೆಣ್ಣಿನ ದೇಹ. ಇಂತಹ ಎಷ್ಟು ನೋವುಗಳನ್ನಾದರೂ ಸಹಿಸಿಕೊಳ್ಳಬಲ್ಲೆ.... ಇಲ್ಲಿ ನೋಡಪ್ಪಾ...... ಈಗಲಾದರೂ ನನ್ನನ್ನು ನಿನ್ನ ಮಗಳಾಗಿ ನೋಡು ಅಪ್ಪಾ...... ನನ್ನನ್ನು ಒಪ್ಪಿಕೋ ಅಪ್ಪಾ...." (ಪು. 24)***

'ನಾನು ಅವನಲ್ಲ.... ಅವಳು' ...... ರಂಗನಾಥನಂಥವರ ಬದುಕಿಗೆ ಏನೇನು ಮುಖಗಳಿರಬಹುದು ಎನ್ನುವುದನ್ನು ನನ್ನ ಮನಸ್ಸಿಗೆ ಸ್ಪಷ್ಟಮಾಡಿತು.

ಲಿವಿಂಗ್ ಸ್ಮೈಲ್ ವಿದ್ಯಾ ಬರೆದ ಈ ಆತ್ಮಕತೆ ಅನೇಕ ಕಾರಣಗಳಿಂದ ತುಂಬಾ ಮುಖ್ಯವಾದದ್ದು. ವಿದ್ಯಾ ಭಾಷಾಶಾಸ್ತ್ರದಲ್ಲಿ ಎಂ.ಎ. ಮಾಡಿದವರು. ಆಕೆ ಹಾಗೂ ಆಕೆಯಂಥವರ ಬದುಕನ್ನು ಹಿಡಿದಿಡುವಲ್ಲಿ ಅಕೆಯ ವಿದ್ಯಾಭ್ಯಾಸ, ಆಕೆಗೆ ರಂಗಭೂಮಿ ಜೊತೆಗೆ ಇದ್ದ ಸಂಬಂಧ ಹಾಗೂ ಸಾಹಿತ್ಯ ವಲಯದ ನಂಟು, ಆಕೆಯ ವ್ಯಕ್ತಿತ್ವವನ್ನು ಅವರ ಜನಾಂಗದ ಇತರರಿಗಿಂತ ಬೇರೆ ಹಾಗೂ ಭಿನ್ನವಾಗಿ ಆಲೋಚಿಸುವುದನ್ನು ಹುಟ್ಟು ಹಾಕಿದುದರಿಂದಲೇ ಇಂದು ಅವರ ಆತ್ಮ ವೃತ್ತಾಂತ 'ನಾನು ಅವನಲ್ಲ.... ಅವಳು' ಪುಸ್ತಕ ನಮ್ಮ ಮುಂದಿದೆ.

***"ನನ್ನ ದೇಹದಲ್ಲಿಟ್ಟುಕೊಂಡಿದ್ದ ಗಂಡಿನ ಚಿಹ್ನೆಯನ್ನು ಕಳಚಿ ತೆಗೆದು ನನ್ನ ದೇಹವನ್ನು ಹೆಣ್ಣಾಗಿಸಿದ್ದಕ್ಕೆ ತುಂಬ ಕೃತಜ್ಞೆಗಳು. ನನ್ನ ಬದುಕಿಗೆ ಇನ್ನು ಇಷ್ಟು ಸಾಕು, ಈ ಕ್ಷಣವೇ ದೇಹದಿಂದ ಪ್ರಾಣ ಹೋದರೂ ಕೂಡಾ. ಇನ್ನು ಈ ಶರೀರದಿಂದ ನಾನು ತೆಗೆದು ಹಾಕಬೇಕಾದುದೇನೂ ಇಲ್ಲ..." (ಪು. 24)***



ನಾನು ಅವನಲ್ಲ.... ಅವಳು....!
ತಮಿಳು ಮೂಲ : ಲಿವಿಂಗ್ ಸ್ಮೈಲ್ ವಿದ್ಯಾ
ಕನ್ನಡಕ್ಕೆ : ಡಾ. ತಮಿಳ್ ಸೆಲ್ವಿ
ಪ್ರ : ಪ್ರಗತಿ ಗ್ರಾಫಿಕ್ಸ್, ಬೆಂಗಳೂರು
ಪು : 224
ಬೆಲೆ : ರೂ. 150/-

ನಾವು ಸ್ತ್ರೀವಾದಿಗಳು ಹೆಣ್ತನ – ಗಂಡುತನದ ಬಗ್ಗೆ ಆ ಕಾಲದಿಂದಲೂ ಚರ್ಚೆ ಮಾಡುತ್ತಲೇ ಬಂದಿದ್ದೇವೆ. ಹೆಣ್ಣಿನಲ್ಲಿರುವ ಗಂಡುತನ, ಗಂಡಿನಲ್ಲಿರುವ ಹೆಣ್ತನದ ಬಗ್ಗೆ ವಿಶ್ಲೇಷಿಸುತ್ತಾ ಅರ್ಧನಾರೀಶ್ವರ ಕಲ್ಪನೆಯನ್ನು ಎತ್ತಿ ಹಿಡಿಯುತ್ತಲೇ ಬಂದಿದ್ದೇವೆ. ನಾವು ಮಾತನಾಡುವ ಲಯ ಆಂತರ್ಯಕ್ಕೆ, ಮನಸ್ಸಿನ ವಲಯಕ್ಕೆ ಸೇರಿದ್ದು. ಗಡ್ಡ ಮೀಸೆಯುಳ್ಳ ಗಂಡಸು ಮೆದುವಾಗಿರುವುದು, ಅಂತಃಕರಣ ಹೊಂದಿರುವುದು, ಕಾಳಜಿ ವಹಿಸುವುದು. ಕೌಟುಂಬಿಕ ಪರಿಸರದಲ್ಲಿ ಅತ್ಯಂತ ಆತ್ಮೀಯವಾಗಿ ಇರುವುದು – ಇವು ಗಂಡಿನಲ್ಲಿರುವ 'ಹೆಣ್ತನ'ಗಳೆಂದು ಅಂದುಕೊಂಡರೆ, ಮೊಲೆಯುಳ್ಳ ಹೆಣ್ಣು ಈ ಬಾಹ್ಯ ಪ್ರಪಂಚಕ್ಕೆ ಮುಖಾಮುಖಿಯಾಗಿ ಎಲ್ಲದಕ್ಕೂ ಮುಂದೆ ಹೋಗುವ, ಎಲ್ಲದನ್ನೂ ಪ್ರಶ್ನಿಸುವ, ಎಲ್ಲವನ್ನೂ ಎದುರಿಸುವ ಮನಸ್ಥಿತಿಯವಳಾದರೆ – ಇವು ಆಕೆಯಲ್ಲಿರುವ 'ಗಂಡುತನ'ಗಳೆಂದು ಗುರುತಿಸುತ್ತೇವೆ. ಈ ಹೆಣ್ತನ ಗಂಡುತನಗಳನ್ನು ಬಾಹ್ಯ ಚಹರೆಗಳಿಂದಾಗಿ ಪ್ರತ್ಯೇಕಿಸುವ ಬಗ್ಗೆ ನಮ್ಮ ತಕರಾರು ಯಾವಾಗಲೂ ಇದ್ದೇ ಇದೆ.

ವಿದ್ಯಾ ತೆರೆದಿಡುವ ಪ್ರಪಂಚದ ಹೆಣ್ಣು–ಗಂಡಿನ ಘರ್ಷಣೆಯ ಸ್ವರೂಪ, ಅಸ್ತಿತ್ವದ ಪ್ರಶ್ನೆಗಳು ಸಂಪೂರ್ಣವಾಗಿ ಭಿನ್ನವಾದಂಥವುಗಳು. ಇಲ್ಲಿ ಗಡ್ಡ–ಮೀಸೆ ಮೂಡಿದ ಗಂಡಿಲ್ಲ, ಮೊಲೆ ಮೂಡಿದ ಹೆಣ್ಣೂ ಇಲ್ಲ. ಇಲ್ಲಿ ಗಂಡು ಎಂಬಂತೆ ಜನಿಸಿದ ಶರವಣ ಗಂಡಿನ

ಜನನಾಂಗವೊಂದನ್ನು ಹೊಂದಿರುವುದಕ್ಕಾಗಿ 'ಗಂಡಾ'ಗ ಬೇಕಾದ ಪ್ರಶ್ನೆ. ಬಾಹ್ಯದಲ್ಲಿ ಗಂಡಾಗಿ ವರ್ತಿಸಬೇಕಾದ ಶರವಣನ ಆಂತರ್ಯ ಹೆಣ್ಣಾಗಿ ನರ್ತಿಸುತ್ತದೆ. ಬಾಲ್ಯ ದಿಂದಲೇ ಹೆಣ್ಣು ಉಡುಗೆಗಳಿಗೆ ಮನಸ್ಸು ಹಂಬಲಿಸುತ್ತದೆ. ಹೆಣ್ಣಿನ ರೀತಿಯ ಅಲಂಕಾರ, ರೂಪ, ಚೈತನ್ಯಗಳಿಗೆ ಮನಸ್ಸು ಪ್ರತಿಕ್ಷಣ ಮಿಡಿಯುತ್ತದೆ. ಹುಟ್ಟಿದ ಕ್ಷಣದಿಂದ ಕುಟುಂಬ, ಸಮಾಜದ ಕಣ್ಣುಗಳಿಗೆ ಗಂಡಾಗಿ ಕಾಣಿಸಿಕೊಂಡ ಶರವಣನಿಗೆ ತನಗೆ ಗಂಡಿನ ಚಿಹ್ನೆ ಅಂಟಿಕೊಂಡಿದೆ, ತಾನು ಗಂಡಲ್ಲ, ತನ್ನ ಆಂತರ್ಯದಲ್ಲಿ ಹೆಣ್ಣಿದೆ, ತಾನು ಗಂಡಾಗಿ ಕಾಣಿಸಿಕೊಳ್ಳುತ್ತಿರುವುದು ಕುಟುಂಬದ, ಸಮಾಜದ ಒತ್ತಡಕ್ಕಾಗಿ ಎಂಬುದು ಮನಸ್ಸಿಗೆ ಬಂದಾಗಿನಿಂದ ಅವನ ಒದ್ದಾಟ, ಒತ್ತಡ, ಗಂಡು ಚಿಹ್ನೆಯನ್ನು ಕಿತ್ತು ಹಾಕಿ ಮನಸ್ಸು ಹೇಳಿದ ಹಾಗೆ ಹೆಣ್ಣಾಗಿಯೇ ಹೆಣ್ತನ ಒಪ್ಪಿಕೊಳ್ಳಬೇಕೆಂಬ ಆತನ ತಾಕಲಾಟಗಳು ನಮ್ಮ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತವೆ. ನಾಲ್ಕನೇ ದರ್ಜೆಯ ಕಸಗುಡಿಸುವ

---

*ಹೊರಗೆಲ್ಲೋ ಹೋಗಿದ್ದ ನನ್ನ ಅಜ್ಜಿ ಅನಿರೀಕ್ಷಿತವಾಗಿ ಒಳಬಂದು, 'ಅಯ್ಯೋ ಪಾಪಿ ಮುಂಡೇದೆ । ಏನೋ ಇದು ಹುಡುಗತನ ..... ಇಲ್ಲೋಡ್ರೆ ..... ಇವನು ಆಡ್ತಿರೋ ಆಟಾನಾ?' ಎಂದು ಹೊರಗಿದ್ದ ಯಾರನ್ನೋ ಜೋರಾಗಿ ಕೂಗಿದಳು. ಅಜ್ಜಿಗೆ ನಾನು ಲಂಗಧರಿಸಿ ಹುಡುಗಾಟದಿಂದ ಏನೋ ಆಟ ಆಡಿಕೊಳ್ತಿದ್ದೀನಿ ಅನ್ನೋಭಾವನೆ. ಅವಳಿಗೇನು ಗೊತ್ತು, ಅದು ನಿಜವಲ್ಲ ಅಂತ. ಅಥವಾ ಯಾವುದೂ ನಿಜ ಅಲ್ಲ. (ಪು. 34)*

* * *

*ಭಾವನಿಗೆ ಮಾತ್ರ ಬೇರೇನೋ ಅರ್ಥವಾಗಿರಬೇಕು. ನನ್ನ ಬಂಧುಗಳಲ್ಲೆಲ್ಲಾ ನಾನು ಒಬ್ಬ ಅಬ್‌ನಾರ್ಮಲ್ ಎಂದು ಅರ್ಥ ಮಾಡಿಕೊಂಡ ಮೊದಲ ವ್ಯಕ್ತಿ ಅವರೇ. ಊಟ ಮಾಡುವಾಗ, 'ಯಾಕೋ ಹುಡುಗಿ ತರಹ ಮೆಲ್ಲಗೆ ತಿಂತೀಯ?' ಎಂದೋ, 'ಗಂಡಸಿನ ಹಾಗೆ ಎದೆ ನಿಮಿರಿಸಿ ನೆಟ್ಟಗೆ ನಿಂತ್ಕೊಳ್ಳೋ' ಎಂದೋ, 'ಯಾಕೋ ಸೊಂಟಾನ ಬಳುಕಿಸಿಕೊಂಡು ನಡೀತೀಯ? ಏನಾಯ್ತು?' ಎಂದು – ಹೀಗೆ ಏನಾದರೂ ಹೇಳುತ್ತಲೇ ಇರುತ್ತಿದ್ದರು. (ಪುಟ. 49)*

---

ನೌಕರನಾದ ತಂದೆ ಬಯಸಿ, ಬಯಸಿ ಪಡೆದ ಗಂಡು ಮಗ ಈತ, ತಂದೆಗೆ ಇವನೇ ಎಲ್ಲಾ. ಉಳಿದೆರಡು ಬದುಕಿ ಉಳಿದ ಹೆಣ್ಣುಮಕ್ಕಳ ನಡುವೆ ಇವನೊಬ್ಬನೇ ಗಂಡು ಮಗ ಎನ್ನುವ ಕುಟುಂಬದ ನೆಮ್ಮದಿಯನ್ನು ಅಳಿಸಬೇಕಾಗಿ ಬಂದ ಶರವಣನ ಅನಿವಾರ್ಯ ಸ್ಥಿತಿ, ಅಪ್ಪನಿಗೆ ಕೊನೆಯ ವರೆಗೆ ಅವನನ್ನು ಶರವಣನಲ್ಲ, ವಿದ್ಯಾ ಎಂದು ಒಪ್ಪಿಕೊಳ್ಳಲು ಆಗದೇ ಇರುವ ಸಂಕಟಗಳು 'ನಾರ್ಮಲ್' ಆಗಿರುವ ಪ್ರಪಂಚಕ್ಕೆ ದಿಗ್ಭ್ರಮೆ ಹುಟ್ಟಿಸುವಂತಹವುಗಳು. ಆದರೆ ಅದು ಸತ್ಯ. ಪಿತೃಪ್ರಧಾನ ಮೌಲ್ಯದ ಪ್ರತೀಕವಾದ ತಂದೆ ಶರವಣನ ಸುತ್ತ ಒಂದು ಪ್ರಪಂಚವನ್ನೇ ಸೃಷ್ಟಿಸಿ ಕೊಂಡು ಬಿಡುತ್ತಾರೆ. ಮಗನನ್ನು ಓದಿಸಿ ಅಧಿಕಾರಿಯನ್ನಾಗಿ ಮಾಡುವುದೇ ಅವರ ಜೀವನದ ಪರಮ ಉದ್ದೇಶ. ಕುಟುಂಬದ ಎಲ್ಲರೂ ಅವನ ಓದಿಗೆ ಒತ್ತಾಸೆಯಾಗಿ

## ಒಂದು ಅನಿಸಿಕೆ

"ನಾನು ಅವನಲ್ಲ – ಅವಳು!" ಎಂಬ ಆತ್ಮಕಥೆಯನ್ನು ಓದಿಮುಗಿಸಿದಾಗ ಮನಸ್ಸು ಭಾರವಾಯಿತು. ನಮ್ಮ ನಡುವೆ ಬದುಕುವ ಇಂಥ ಎಷ್ಟೋ ಜೀವಗಳ ಬಗ್ಗೆ ಯೋಚಿಸುವಂತೆ ಮಾಡಿತು. ಅದೇಕೆ ನಾವು ಇಂಥವರನ್ನು ಕಂಡಾಗ ತಪ್ಪಿಸಿಕೊಂಡರೆ ಸಾಕು ಎಂಬಂತೆ ವರ್ತಿಸುತ್ತೇವೆ? ಅವರೊಂದಿ ಗೇಕೆ ಮಾನವೀಯತೆಯಿಂದ ಸಹಾನುಭೂತಿಯಿಂದ ವರ್ತಿಸುವುದಿಲ್ಲ? ಅವರ ಬದುಕಿನ ರೀತಿ ನೀತಿಯನ್ನೇಕೆ ಅನುಮಾನ ಹೆದರಿಕೆಗಳಿಂದ ಕಾಣುತ್ತೇವೆ? ಇಂಥ ನೂರಾರು ಪ್ರಶ್ನೆಗಳು ಮೂಡಿ ನಿಲ್ಲುತ್ತವೆ.

ಈ ಪುಸ್ತಕದ ಲೇಖಕಿಯ ದಿಟ್ಟತನವನ್ನು ಕಂಡು ಮೆಚ್ಚುಗೆ ಮೂಡಿತು. ಸಾರಸ್ವತ ಲೋಕ ಇಂಥ ಆತ್ಮಕಥನಗಳಿಂದ ಹೊಸಬಗೆಯ ಆಯಾಮವನ್ನೇ ಹೊಂದಿದಂತಾಗಿದೆ. ಲಕ್ಷ್ಮಣರಾವ್ ಗಾಯಕವಾಡರ 'ಉಚಲ್ಯಾ' ಓದಿದಾಗ ಕಂಡ ಹೊಸ ಜಗತ್ತಿನ ಅನುಭವವೇ ಇನ್ನೊಂದು ಸ್ವರೂಪದಲ್ಲಿ ಈ ಕೃತಿಯಲ್ಲಿ ಕಾಣುತ್ತದೆ. ಮುಖ್ಯವಾಹಿನಿಯಲ್ಲಿ ನನ್ನನ್ನು ನಾನಿರುವಂತೆಯೇ ಸ್ವೀಕರಿಸಬೇಕೆಂಬ ಛಲದ ಹಿಂದಿನ ಜೀವನಪ್ರೀತಿ ಉಳಿದ ಸಮಾನಮನಸ್ಕ ಜೀವಗಳಿಗೆ ದಾರಿದೀಪವಾಗಿದೆ.

ಹೀಗೇ ಹುಟ್ಟಬೇಕೆಂದು ಯಾರು ತಾನೇ ಅಪೇಕ್ಷೆಪಟ್ಟು ಹುಟ್ಟಲು ಸಾಧ್ಯ? ಮನಸ್ಸು – ದೇಹಗಳೆರಡೂ ಹೆಣ್ತನವನ್ನೇ ಆಯ್ದುಕೊಂಡಾಗ, ಹಾಗೇ ಮಾರ್ಪಾಡಾಗುವ ರೀತಿಯಲ್ಲಿ ಲೇಖಕಿ ಎದುರಿಸುವ ಸಮಸ್ಯೆಗಳು, ಸಂಘರ್ಷದ ಬದುಕಿನ ನೋವುಗಳು ಮನಕಲಕುವಂತೆ ಈ ಕೃತಿಯಲ್ಲಿ ಮೂಡಿವೆ. ಅಕ್ಷರದ ಸಂಪರ್ಕ ಲೇಖಕಿಯ ಅಭಿವ್ಯಕ್ತಿಗೆ ದಾರಿ ತೆರೆದಿದೆ.

ಪುರುಷತ್ವವನ್ನು ಕಳೆದುಕೊಳ್ಳಲು ಶಸ್ತ್ರಚಿಕಿತ್ಸೆಗಾಗಿ ಹೋದಾಗಿನ ಸಂದರ್ಭ ಅತ್ಯಂತ ಘೋರವೇದನೆಯ ಅಧ್ಯಾಯವನ್ನೇ ತೆರೆದಿಟ್ಟಿದೆ. ಯಾಕೆ ನಮ್ಮ ಸಮಾಜದಲ್ಲಿ ಇದಕ್ಕೆ ಸೂಕ್ತ ಸೌಲಭ್ಯಗಳನ್ನು ನೀಡುವುದಕ್ಕೆ ನಾವು ಹಿಂಜರಿಯುತ್ತಿದ್ದೇವೆ? ಯಾಕೆ ಈ ಬಗೆಯ ಹಕ್ಕನ್ನು ನಿರಾಕರಿಸ ಲಾಗುತ್ತಿದೆ? ಈ ಬಗೆಯ ನಿಲುವಿನಿಂದ ಅವರನ್ನು ನಾವು ಅಮಾನವೀಯ ವಾಗಿ ನಿರ್ಲಕ್ಷಿಸಿರುವುದು ನಮ್ಮೊಳಗಿನ ಕ್ರೌರ್ಯದ ಸಂಕೇತವಲ್ಲವೇ?

'ಲಿಂಗ ಪರಿವರ್ತನೆ'ಯ ಅನಂತರ ಬದುಕಲು ಎಷ್ಟೆಲ್ಲಾ ತೊಡಕುಗಳು! ಭಿಕ್ಷುಕರಾಗಿ, ಲೈಂಗಿಕ ಕಾರ್ಯಕರ್ತರಾಗಿ ಎಷ್ಟೆಲ್ಲಾ ನೋವು – ಅವಮಾನಗಳನ್ನು ನುಂಗಿ ಬದುಕಬೇಕು. ಇತ್ತ ಕೌಟುಂಬಿಕ ನೆಲೆಯೂ ಇಲ್ಲದೆ ಅತ್ತ ಸಮಾಜದ ತಿರಸ್ಕಾರಕ್ಕೂ ಒಳಗಾಗಿ ಅಂತಿಮವಾಗಿ ಬದುಕನ್ನು ರೂಪಿಸಿಕೊಳ್ಳಲು ಹೆಣಗುವ ಇಂಥ ಜೀವಗಳಿಗೆ ಯಾವ ಆಯ್ಕೆಗಳಿವೆ?

ಈ ಕೃತಿಯ ಲೇಖಕಿ ಆಯ್ದುಕೊಳ್ಳುವ ದಾರಿ ಮೆಚ್ಚುಗೆಗೆ ಅರ್ಹ ವಾದುದು. ಅನ್ಯವಾಗಿ ಕಾಣುವ ಒಳತೋಟಿಯನ್ನು ಕುತೂಹಲಕಾರಿಯಾಗಿ ನಿರೂಪಿಸುವಲ್ಲಿ ಈ ಕೃತಿ ಯಶಸ್ವಿಯಾಗಿದೆ. ಆದರೆ, ಹೆಣ್ಣಾಗಿ ಬದುಕಬೇಕೆಂಬ ಹಂಬಲದೊಂದಿಗೆ ಲೈಂಗಿಕ ಕಾಮನೆಗಳ ನಿರ್ವಹಣೆ ಹೇಗೆ ಎಂಬ ಬಹುಮುಖ್ಯ ಪ್ರಶ್ನೆಯನ್ನು ಈ ಕೃತಿ ಎದುರಿಸದಿರುವುದು ದೊಡ್ಡ ಕೊರತೆಯಾಗಿ ಕಾಣುತ್ತದೆ. ಬದುಕಿಗೆ ಏನೆಲ್ಲ ನೆಲೆ ಹುಡುಕುವಾಗ, ಮಾನಸಿಕ – ದೈಹಿಕ ಆಸರೆಗಳ ಹಂಬಲ ಮುಖ್ಯವಾಗಿ ಕಾಣದಿರುವುದು ಆಶ್ಚರ್ಯಕರ.

ಇಂಥ ಆತ್ಮಕಥೆಯೊಂದು ಪ್ರಕಟವಾದಾಗಲಾದರೂ ಮುಕ್ತವಾಗಿ ಚರ್ಚಿಸುವ ಹೃದಯವಂತಿಕೆಯನ್ನು ಕಾಣಬಲ್ಲೆವೆ ಎಂಬುದನ್ನು ಕಾಯ್ದು ನೋಡಬೇಕು. ಮೂಲ ಕೃತಿಯನ್ನೇ ಓದಿದ ಅನುಭವ ನೀಡುವಂಥ ಕನ್ನಡಾನುವಾದ ಮಾಡಿರುವ ಡಾ॥ ತಮಿಳುಸೆಲ್ವಿಯವರ ಪ್ರಯತ್ನ ಅಭಿನಂದನಾರ್ಹವಾದುದು.

■ *ಎಚ್.ಎಸ್. ಸತ್ಯನಾರಾಯಣ*

ನಿಲ್ಲಬೇಕು ಅಷ್ಟೇ. ಶರವಣನಿಗೆ ಗಂಡೆಂದು ಭ್ರಮಿಸಿ ತಂದೆಯ ಅಧಿಕಾರದ, ಪ್ರಭುತ್ವದ ಒಳಗೆ ಬದುಕುವುದು ದುಸ್ತರ ಎನಿಸುತ್ತದೆ. ಕದ್ದು ಮುಚ್ಚಿ ಹೆಣ್ತನದ ಸುಖಗಳನ್ನು ಅನುಭವಿಸಲಾರೆ ಎನಿಸುತ್ತದೆ. ಗಂಡು – ಹೆಣ್ಣು ಈ ದ್ವಂದ್ವ ಕಿತ್ತು ಹಾಕಬೇಕು ಎನ್ನುವ ಒತ್ತಡ ಕಾಡ ತೊಡಗುತ್ತದೆ. ಅಸ್ತಿತ್ವಕ್ಕಾಗಿ ತಲ್ಲಣ. ಗಂಡು ಉಡುಪುಗಳು ನಿರಾಕರ್ಷಕ ವಾಗುತ್ತವೆ; ಹೆಣ್ತನದ ಆಕರ್ಷಣೆಯಲ್ಲಿ ಓಲೆ, ಮೂಗುತಿ, ಮಿಡಿಗಳು ಆಕರ್ಷಿಸುತ್ತವೆ. ಗಂಡೆಂದು ಹೇಳಲು ಅಂಟಿಕೊಂಡಿರುವ ಜನನಾಂಗ ವನ್ನು ಕಿತ್ತು ಹಾಕಿ ಪೂರ್ತಿಯಾಗಿ ಹೆಣ್ತನವನ್ನು ಅಪ್ಪಿಕೊಳ್ಳುವ ಬಯಕೆಯ ಅಗಾಧತೆಯ ನಡುವೆಯೂ ಗಂಡು ಉಡುಪಿನಲ್ಲಿಯೇ ಶರವಣ ಭಾಷಾಶಾಸ್ತ್ರದಲ್ಲಿ ಎಂ.ಎ. ಪದವೀಧರರಾಗುತ್ತಾರೆ.

ಶರವಣ → ವಿದ್ಯಾ ಆಗಿ → ಈಗ ಸ್ಮೈಲಿಂಗ್ ವಿದ್ಯಾ ಆಗಿ ಬದುಕುತ್ತಿರುವ ಬದುಕು ನಮ್ಮ ಆಲೋಚನೆಗಳಿಗೆ, ಸ್ತ್ರೀವಾದಿ ನೋಟಕ್ಕೆ, ಗಂಡು–ಹೆಣ್ಣಿನ ವ್ಯಾಖ್ಯಾನಕ್ಕೆ, ಗಂಡ–ಹೆಂಡತಿ ಎಂಬ ಲೈಂಗಿಕ ಸಂಬಂಧವೇ ಪರಮಸತ್ಯ ಎನ್ನುವ ತಾತ್ತ್ವಿಕತೆಗೆ ಅನೇಕ ರೀತಿಯಾದ ಸವಾಲುಗಳನ್ನು ಎಸೆಯುತ್ತದೆ. ಮಾನಸಿಕ ವ್ಯಾಪಾರದಲ್ಲಿ ಅರ್ಧನಾರೀಶ್ವರ ಕಲ್ಪನೆಯನ್ನು ಹುಟ್ಟುಹಾಕಬೇಕೆನ್ನುವ ಸ್ತ್ರೀವಾದಿ ಚಿಂತನೆಗಳು ವಿದ್ಯಾರ ದೈಹಿಕ – ಮಾನಸಿಕ ಒದ್ದಾಟಗಳನ್ನು ಹೇಗೆ ಗ್ರಹಿಸುತ್ತವೆ? ಶರವಣನಿಂದ ವಿದ್ಯಾ ಆದಾಗ ಮೂಗುತಿಯನ್ನು ಯಾವುದೇ ಕಾರಣಕ್ಕೂ ಹಿಜಡಾ ಸಂಸ್ಕೃತಿ ತೆಗೆಯುವುದೇ ಇಲ್ಲ ಎನ್ನುವುದನ್ನು ಸ್ತ್ರೀವಾದಿ ನೋಟ ಹೇಗೆ ಸ್ವೀಕರಿಸುತ್ತದೆ? ವಿದ್ಯಾಳಂತೆ ಒದ್ದಾಡುವ ಹಿಜಡಾಗಳ ಗಂಡು – ಹೆಣ್ಣಿನ ವ್ಯಾಖ್ಯಾನ ಏನು? ತನ್ನನ್ನು ಹೆಣ್ಣು ಎಂದೇ ಸ್ವೀಕರಿಸಬೇಕು ಎಂದು ತವಕ ಪಡುವ ಶರವಣ, ಆ ಗುರುತಿಸುವಿಕೆಯಲ್ಲಿ ಪಡೆವ ಸುಖ, ಗಂಡು – ಹೆಣ್ಣಿನ ಬಾಹ್ಯ ರೂಪದ ಒತ್ತಡ ಮೀರಿದ ಹೆಣ್ತನದಲ್ಲಿ ಕಾಣುವ ಸುಖ. ಇವುಗಳನ್ನು ನಾವು ಹೇಗೆ ಅರ್ಥೈಸಿಕೊಳ್ಳುತ್ತೇವೆ?

ಲಿವಿಂಗ್ ಸ್ಮೈಲ್ ವಿದ್ಯಾ ಇಲ್ಲಿ ತೆರೆದಿಡುವ ಹಿಜಡಾ ಸಂಸ್ಕೃತಿಯ ಲೋಕ ವಿಭಿನ್ನವಾದದ್ದು. ಹಿಜಡಾ ಆಗುವ ಮುಂಚೆ ಕೋತಿಯಾಗಿರು ವುದು, ಆಪರೇಷನ್ ಆದ ಮೇಲೆ ಹಿಜಡಾ ಆಗುವುದು, ಹಿಜಡಾ ಜನರ ಸಂಬಂಧಗಳಲ್ಲಿ ಅಕ್ಕ, ತಂಗಿ, ಅಮ್ಮ, ಅಜ್ಜಿಯಾಗುವ ವರಸೆಗಳು, ಈ ಸಮುದಾಯ ಹೊಸಬರನ್ನು ಸಮುದಾಯಕ್ಕೆ ಸೇರಿಸಿಕೊಳ್ಳುವ ಬಗೆಗಳು, ಸರ್ಕಾರದ ಅನುಮತಿಯಿಲ್ಲದೇ ಹಿರಿಯ ಹಿಜಡಾಗಳೇ ಕರೆದೊಯ್ದು 'ನಿರ್ವಾಣ' ಮಾಡಿಸುವ ರೀತಿ, ಈ 'ನಿರ್ವಾಣ'ದ ಆಪರೇಷನ್ ನಡೆಯುವ ಅಮಾನವೀಯ ಚಿತ್ರಣಗಳು, ಆಪರೇಶನ್ ಅಂದರೆ ನಿರ್ವಾಣವಾದ ಮೇಲೆ ಇಡೀ ಸಮುದಾಯವೇ ಅವರನ್ನು ಆರೈಕೆ ಮಾಡುವ ಹೊಣೆ ಹೊತ್ತು ಕೊಳ್ಳುವುದು, ಅನಂತರ ಸಾಂಪ್ರದಾಯಿಕವಾಗಿ ತಮ್ಮ ಗುಂಪಿನಲ್ಲಿ ಸೇರಿಸಿಕೊಳ್ಳುವುದು ಹೀಗೆ ಹಿಜಡಾಗಳೇ ಹುಟ್ಟಿ ಹಾಕಿಕೊಂಡಿರುವ ಸಾಂಸ್ಕೃತಿಕ ಬದುಕಿನ ಕತೆಗಳನ್ನು ಸಹ ವಿದ್ಯಾ ನಮ್ಮ ಕಣ್ಣ ಮುಂದೆ ಬಿಚ್ಚಿಡುತ್ತಾರೆ. ಅವರ ಸಾಂಸ್ಕೃತಿಕ ಲೋಕದಲ್ಲಿ ಬಳಕೆಯಲ್ಲಿರುವ ಅನೇಕ ಪರಿಭಾಷೆಗಳನ್ನು ಸಹ ಅವರು ಪರಿಚಯಿಸುತ್ತಾರೆ. ಪಾಂಪಡುತ್ತಿ, ರೀತ್ ಹಾಕುವುದು, ಅಂಗಡಿ ಕೇಳುವುದು, ಟ್ರೈನ್ ಕೇಳುವುದು, ನಿರ್ವಾಣ ಇವುಗಳೆಲ್ಲ ಇವರ ಬದುಕಿನೊಳಗೆ ತಳುಕು ಹಾಕಿಕೊಂಡ ರೀತಿ ರಿವಾಜುಗಳು – ಹೀಗೆ ಈ ಪುಸ್ತಕ ಹಿಜಡಾಗಳ ಬದುಕಿನ ಚಾರಿತ್ರಿಕ ನೋಟವನ್ನು ನೀಡಲು ಪ್ರಯತ್ನಿಸಿದೆ. ಅರ್ಜುನ–ಬೃಹನ್ನಳೆಯರ ಮಗ ಶಿಖಂಡಿಯ ಬಗ್ಗೆ, ಹಿಜಡಾಗಳ ದೈವವಾದ ಮಾತಾಳ ಬಗ್ಗೆ ಕೂಡಾ ಮಾಹಿತಿ ಇದೆ. ನಿರ್ವಾಣವಾದ ನಂತರ ಹಿಜಡಾ ಒಬ್ಬರನ್ನು ಸ್ವೀಕರಿಸಲು ನಡೆಸುವ ಸಾಡ್ಲಾ ಆಚರಣೆ, ಕೂವಾಗಂ ಎನ್ನುವ ಊರಿನಲ್ಲಿ ಕೂತ್ತಾಂಡವರ್ ದೇವರ ದೇವಾಲಯದದಲ್ಲಿ ಹಿಜಡಾಗಳಿಗಾಗಿಯೇ ನಡೆಯುವ ಜಾತ್ರೆ ಇಂತಹ ಸಾಂಸ್ಕೃತಿಕ ವಿವರಗಳನ್ನು ಸಹ ವಿದ್ಯಾ ತಮ್ಮ ಆತ್ಮ ಕತೆಯಲ್ಲಿ ನೀಡಿದ್ದಾರೆ. ಹಿಜಡಾ ಲೋಕದಲ್ಲಿರುವ ಅನೇಕ ಗುಂಪುಗಳು, ಸೀನಿಯಾರಿಟಿಗೆ ಅವರು ನೀಡುವ ಪ್ರಾಶಸ್ತ್ಯ, ಗೌರವ, ವಿಧೇಯತೆ ನಿರೀಕ್ಷಿಸುವ ರೀತಿ ಇಂತಹ ವಿವರಗಳು ಸಹ ಆತ್ಮಕತೆಯಲ್ಲಿವೆ. ಹಿಜಡಾ ಲೋಕವನ್ನು ರೋಮಾಂಚಕಾರಿಯಾಗಿಸದೇ ಅದರ ಎಲ್ಲಾ ವೈರುಧ್ಯ ಗಳೊಂದಿಗೇ ನಮ್ಮೆದುರಿಗೆ ಬಿಚ್ಚಿಡುವಲ್ಲಿ ವಿದ್ಯಾ ಯಶಸ್ವಿಯಾಗಿದ್ದಾರೆ.

ಈ ಪ್ರಪಂಚದ ತಮ್ಮವರೆಲ್ಲರಿಗಿಂತ ವಿದ್ಯಾ ಭಿನ್ನವಾಗುವುದು ಅವರ ಆಯ್ಕೆಯಲ್ಲಿ. ಹೆಣ್ತನ ಒಪ್ಪಿಕೊಳ್ಳುವುದಕ್ಕಾಗಿ ಕುಟುಂಬ ಬಿಟ್ಟು ಓಡಿ ಹೋಗುವ ಇವರು ನಿರ್ವಾಣ ಮಾಡಿಸಿಕೊಳ್ಳಲೇಬೇಕು ಎಂಬ ಹಠಕ್ಕಾಗಿ ಭಿಕ್ಷೆ ಬೇಡುವ ಅನಿವಾರ್ಯತೆಯನ್ನು ಒಪ್ಪಿಕೊಳ್ಳುತ್ತಾರೆ. ಕೈ ತಟ್ಟುವುದನ್ನು ಕಲಿಯುತ್ತಾರೆ. ತಾವು ಕಲಿತ ವಿದ್ಯೆ ನೆನಪಾದಾಗಲೂ ಹೆಣ್ತನಕ್ಕಾಗಿ ಹಂಬಲಿಸಿ ಅಂಗಡಿ, ಟ್ರೈನ್ ಕೇಳುವುದನ್ನು ರೂಢಿಸಿಕೊಳ್ಳುತ್ತಾರೆ. ಭಿಕ್ಷೆ ಬೇಡುವಾಗಿನ ಸಿಟ್ಟು, ಅವಮಾನ, ಹತಾಶೆ ಗಳನ್ನು, ಅವಮಾನದ ಪ್ರಕರಣಗಳನ್ನು ಎದುರಿಸುತ್ತಾರೆ. ಆಪರೇಷನ್ ಮಾಡಿಸಿಕೊಂಡು ಹೆಣ್ಣಾಗಿಯೇ ಈ ಪ್ರಪಂಚಕ್ಕೆ ತಾನು ಕಾಣಿಸಬೇಕು. ಗಂಡು–ಹೆಣ್ಣಿನ ದ್ವಂದ್ವ ಬೇಡ, ತನ್ನ ಅಸ್ತಿತ್ವವನ್ನು ಬಹಿರಂಗವಾಗಿ ಒಪ್ಪಿಕೊಳ್ಳಬೇಕೆನ್ನುವ ಪ್ರಾಮಾಣಿಕ ತುಡಿತಕ್ಕೆ, ಬದುಕಿಗೆ, ಬದುಕಿನ ಎಳೆತಕ್ಕೆ, ಸೆಳವಿಗೆ ಒಡ್ಡಿಕೊಳ್ಳುತ್ತಲೇ ವಿದ್ಯಾ ಆಗುತ್ತಾರೆ. ಈ ಬದಲಾವಣೆಗೆ ತಮ್ಮವರನ್ನೂ ಒಗ್ಗಿಸಲು ಪ್ರಯತ್ನಿಸುತ್ತಾರೆ. ಹೆಣ್ಣಾದ ಮೇಲೆ ಹೆಣ್ಣಿನ ವೇಷ ಧರಿಸಿದ ವಿದ್ಯಾ ಅಪ್ಪ–ಅಕ್ಕಂದಿರನ್ನು ಭೇಟಿಯಾದಾಗಿನ ಚಡಪಡಿಕೆ, ಸಂಕಟವನ್ನು ನೋವಿನಿಂದ ಬಿಚ್ಚಿಡುತ್ತಾರೆ. ಹೆಣ್ಣಿನ ವೇಷದಲ್ಲಿ ಬಂದ ಮಗನನ್ನು ಸ್ವೀಕರಿಸಲಾರದ ಅಪ್ಪನ ಸಂಕಟವನ್ನು ವೇದನೆಯಿಂದ ವಿದ್ಯಾ ನಿವೇದಿಸುತ್ತಾರೆ.

---

*ಏಕಾಂತದಲ್ಲಿ ಸಿಗುತ್ತಿದ್ದ ಭಯ ಮಿಶ್ರಿತ ಸ್ವಾತಂತ್ರ್ಯದಲ್ಲಿ ನನ್ನನ್ನು ಒಬ್ಬ ಸಂಪೂರ್ಣ ಹೆಣ್ಣಾಗಿಯೇ ಭಾವಿಸುವುದು ನನಗೆ ತುಂಬ ಸಂತೋಷ ನೀಡುತ್ತಿತ್ತು. ಮೈ ಒರೆಸಿಕೊಳ್ಳುವ ಟವಲ್ಲನ್ನು ಚೂಡಿದಾರ ಮೇಲೆ ಹಾಕಿಕೊಳ್ಳುವ ದುಪ್ಪಟ್ಟಾದ ಹಾಗೆ ಎದೆಯ ಮೇಲೆ ಹಾಕಿಕೊಂಡು ನನ್ನೊಳಗೆ ನಾನೇ ಸಂಭ್ರಮಿಸುತ್ತಿದ್ದೆ. ಎರೆಡೂ ಕಾಲುಗಳನ್ನು ಮಡಚಿ ಗೋಡೆಗೆ ಒರಗಿಕುಳಿತು ಮಂಡಿಗಳನ್ನು ಎದೆಗೆ ಆನಿಸಿಕೊಂಡು ಮೇಲೆ ಹೊದ್ದುಕೊಂಡಿದ್ದ ಟವಲನ್ನು ಎಳೆದೆಳೆದು ಮುಚ್ಚಿಕೊಳ್ಳುತ್ತಿದ್ದೆ.* **(ಪುಟ. 51)**

*ನನ್ನಂಥವರಿಗೆ ಕನ್ನಡಿ ಒಂದು ವರಪ್ರಸಾದ. ಕನ್ನಡಿ ಎಲ್ಲರಿಗೂ ಅವರವರ ಸ್ಥೂಲ ಆಕಾರವನ್ನು ಪ್ರತಿಫಲಿಸಿದರೆ, ಹಿಜಡಾಗಳಿಗೆ ಮಾತ್ರ ಅವರ ಮನಸ್ಸನ್ನೂ ಒಳಗಿನ ಭಾವಗಳನ್ನೂ, ಆಂತರಿಕವಾದ ಅವರ ಸ್ತ್ರೀ ತನವನ್ನೂ ಒಂದು ಚಿತ್ರವಾಗಿ ಪರಿವರ್ತಿಸಿ ತೋರಿಸುತ್ತದೆ. ಇದನ್ನು ಇತರರು ಅರ್ಥಮಾಡಿಕೊಳ್ಳಲು ಸಾಧ್ಯವೇ ಇಲ್ಲ. ನಿಮಗೆ ಮುಖವನ್ನೂ, ನನಗೆ ಮುಖದ ಹಿಂದಿರುವ ಮನಸ್ಸನ್ನೂ ತೋರಿಸುವ ಸಾಧನ ಅದು । ನನಗೆ ಎಂದರೆ ನಮಗೆ । ನಮಗೆಲ್ಲರಿಗೂ । (ಪುಟ. 77)*

*ಜನನಾಂಗವನ್ನು ಕತ್ತರಿಸಿ ತೆಗೆಯುವಾಗ ಎಷ್ಟು ನೋವಾಗುತ್ತದೆ ಎಂಬುದನ್ನು ಪದಗಳಿಂದ ವರ್ಣಿಸಲು ಸಾಧ್ಯವೇ ಇಲ್ಲ... ಆ ನೋವನ್ನು ಅನುಭವಿಸುವುದಕ್ಕೆ ಬದಲಾಗಿ ಸತ್ತೇ ಹೋಗೋಣ ಎಂದು ಖಂಡಿತ ಅನ್ನಿಸುತ್ತದೆ. ಹಲವರು ಹಾಗೆ ಸತ್ತು ಹೋಗಿರುವುದೂ ಉಂಟು. ಬಹುಪಾಲು ಕಸಾಯಿಖಾನೆಗಳಲ್ಲಿ ನಡೆಯುವ ಕೆಲಸಕ್ಕೆ ಹಲವು ರೀತಿಗಳಲ್ಲಿ ಸಮೀಪವಾದ ಆಪರೇಷನ್ ಇದು (ಪುಟ. 142)*

---

ಭಿಕ್ಷೆ ಬೇಡುವುದು ತಮಗೆ, ತಮ್ಮ ಘನತೆಗೆ, ತಮ್ಮ ವ್ಯಕ್ತಿತ್ವಕ್ಕೆ ಕುಂದು ತರುವ ಅಂಶ ಎನಿಸಿದ ಮರುಗಳಿಗೆಯಲ್ಲಿ ವಿದ್ಯಾಳ ಆಯ್ಕೆ ಬೇರೆಯಾಗುತ್ತದೆ. ಹಿಜಡಾ ಲೋಕ ಬಿಟ್ಟು ಓಡಿ ಬರುತ್ತಾರೆ. ಬದುಕಿಗಾಗಿ ಭಿಕ್ಷೆ ಬೇಡುವ ಅಥವಾ ಲೈಂಗಿಕ ಉದ್ಯಮಕ್ಕೆ ತೊಡಗಬೇಕಾದ ಅನಿವಾರ್ಯತೆಯನ್ನು ಸಮಾಜ ಹಾಗೂ ಸರ್ಕಾರ ಹಿಜಡಾಗಳ ಮೇಲೆ ಹೇರಿದೆ ಎನ್ನುವ ವಿದ್ಯಾ ಕೆಲಸ ಅರಸಿ ಅಲೆದಾಡುತ್ತಾರೆ. ಸಮಾಜವೆಂಬ ವ್ಯವಸ್ಥೆ ಆಕೆಯನ್ನು ಹೆಣ್ಣಾಗಿ ಒಪ್ಪಿ, ಕೆಲಸ ಕೊಡಲು ಸಿದ್ಧವಿಲ್ಲ; ಮತ್ತದೇ ಅಸ್ತಿತ್ವಕ್ಕಾಗಿ ಹೋರಾಟ. ರಂಗಕರ್ಮಿಗಳ ಹಾಗೂ ಸಾಹಿತ್ಯ ವಲಯದ ಸ್ನೇಹಿತರ ಮುಖಾಂತರ ಹೊಸ ಬದುಕಿಗೆ ಹೆಜ್ಜೆ ಇಡುವಲ್ಲಿ ಯಶಸ್ವಿಯಾಗುತ್ತಾರೆ. ಗಂಡಾಗಿ ಕಾಣಿಸಿಕೊಂಡ ಪ್ರಪಂಚದ ಸ್ನೇಹಿತರೊಡನೆಯೇ ಹೆಣ್ಣಾಗಿ ಹೆಜ್ಜೆ ಹಾಕಿದಾಗ ಅವರೆಲ್ಲರೂ ತೋರಿದ ಮಾನವೀಯ ಪ್ರಬುದ್ಧತೆಯನ್ನು ಕೂಡಾ ಇವರು ತಮ್ಮ ಆತ್ಮಕತೆಯಲ್ಲಿ ಬಿಚ್ಚಿಡುತ್ತಾರೆ.

'ನಾನು ಅವನಲ್ಲ.... ಅವಳು......' ಈ ಪುಸ್ತಕ ಹಿಜಡಾ ಲೋಕ ಹಾಗೂ ಈ ಲೋಕದ ನಡುವಿನ ದ್ವಂದ್ವಗಳನ್ನು ಪರಿಚಯಿಸುತ್ತದೆ. ಹಿಜಡಾಗಳ ಬಗ್ಗೆ ಈ ಪ್ರಪಂಚ ತೋರಿಸುವ ಕ್ರೌರ್ಯವನ್ನು ಬಿಂಬಿಸುತ್ತದೆ. ಈ ಎರಡೂ ಲೋಕಗಳ ಕಂದರದಲ್ಲಿ ವಿದ್ಯಾಳಂತಹ ಸೂಕ್ಷ್ಮಮನಸ್ಸಿನ ವ್ಯಕ್ತಿತ್ವಗಳು ಹೇಗೆ ಯಾತನೆ ಅನುಭವಿಸುತ್ತವೆ ಎಂಬುದನ್ನು ಈ ಆತ್ಮಕತೆ ಬಿಚ್ಚಿ ಇಡುತ್ತದೆ. ಸರ್ಕಾರ ತಮ್ಮನ್ನು ಕೂಡಾ ಒಪ್ಪಿಕೊಂಡು, ಕಾನೂನಿನ ಮೂಲಕ ಆಪರೇಷನ್, ವಿದ್ಯೆ, ಉದ್ಯೋಗ, ರೇಷನ್ ಕಾರ್ಡು, ವಸತಿ ಸೌಕರ್ಯ ಮುಂತಾದ ಬದುಕಿನ ಅವಶ್ಯಕತೆಗಳನ್ನು ಪೂರೈಸಿದಲ್ಲಿ ತಾವೂ ಕೂಡಾ ಇತರರಂತೆ ಬದುಕ ಬಹುದೆಂಬ ಆಶಯವನ್ನು ವಿದ್ಯಾ ವ್ಯಕ್ತಪಡಿಸುತ್ತಾರೆ.

ಇಂದು ಬದುಕಲು ಇರುವ ದಾರಿಗಳು ಎರಡೇ ಎಂದು ಹಿಜಡಾಗಳು ಭಾವಿಸುವರು. ಲೈಂಗಿಕ ಉದ್ಯಮ ಹಾಗೂ ಭಿಕ್ಷೆ ಬೇಡುವುದು. ಇವೆರೆಡರ ಬಗ್ಗೆಯೂ ವಿದ್ಯಾ ಪ್ರಶ್ನೆಗಳನ್ನು ಎತ್ತುತ್ತಾರೆ. ಸರ್ಕಾರೇತರ ಸಂಸ್ಥೆಗಳು ಈ ಎರಡನ್ನೇ ಪ್ರೋತ್ಸಾಹಿಸುತ್ತವೆ ಎಂಬ ಕಾರಣಕ್ಕಾಗಿ ಅವರು ಅಂತಹ ಸಂಸ್ಥೆಗಳಲ್ಲಿ ಕೆಲಸ ಮಾಡಲು ಕೂಡಾ ಇಷ್ಟಪಟ್ಟವರಲ್ಲ. ಸರ್ಕಾರ ಹಾಗೂ ಕಾನೂನುಗಳು ತಮ್ಮ ಪರವಾಗಿ ಕೆಲಸ ಮಾಡಿದರೆ, ಕುಟುಂಬಗಳು ಹಿಜಡಾಗಳನ್ನು ತಮ್ಮ ಮಕ್ಕಳೆಂದೇ ಸಹಜವಾಗಿ ಸ್ವೀಕರಿಸಿದಲ್ಲಿ, ಸಮಾಜ ತಮ್ಮನ್ನು ಸಹಜವಾದ ರೀತಿಯಲ್ಲಿ ಒಪ್ಪಿಕೊಳ್ಳುವಂತಹ ಸ್ಥಿತಿ ನಿರ್ಮಾಣವಾದಾಗ ಮಾತ್ರ ತಮ್ಮಂತಹವರ ಬದುಕು ಕೂಡಾ ಸರಳವಾಗಿ ನಡೆಯಬಹುದು ಎಂಬುದು ವಿದ್ಯಾರವರ ನಿಲುವು. 'ನಾನು ಅವನಲ್ಲ.... ಅವಳು.....!' ಪುಸ್ತಕ – 'ನಾರ್ಮಲ್' ಎಂದುಕೊಂಡ ಈ ಪ್ರಪಂಚದ ಜನರ ಕಣ್ಣು ತೆರೆಯಿಸಿದರೆ 'ಅಬ್‌ನಾರ್ಮಲ್' ಆಗಿ ಕಾಣುವ ಹಿಜಡಾಗಳೂ ಸಹ ನಮ್ಮ – ನಿಮ್ಮಂತೆ 'ನಾರ್ಮಲ್' ಆಗಿ ಬದುಕಬಲ್ಲರು, ನಮ್ಮೊಟ್ಟಿಗೆ ಹೆಜ್ಜೆ ಹಾಕಬಲ್ಲರು.

ಇದೀಗ ಬಂದಿರುವ ಉಚ್ಚ ನ್ಯಾಯಾಲಯದ ತೀರ್ಪಿನ ಹಿನ್ನೆಲೆಯಲ್ಲಿ ಈ ಕೃತಿಯಲ್ಲಿನ ವಿಚಾರಗಳು ಹೆಚ್ಚು ಪ್ರಸ್ತುತವಾಗುತ್ತವೆ. ❑

## ಸಲಿಂಗಕಾಮ : ಒಂದು ಅನಿಸಿಕೆ

ಕಾನೂನಿನ ಸಹಾಯದಿಂದ ಸಲಿಂಗ ಸಂಬಂಧವು ಒಪ್ಪಿಗೆಯಾಗಿರುವುದು ಸರಿಯಷ್ಟೆ. ಗಂಡಸುತನವನ್ನು ಅವಲಂಬಿಸಿ ರಚನೆಗೊಂಡಿರುವ ಸಮಾಜಗಳು ಸಾಮಾನ್ಯವಾಗಿ ಬಹು ಸಾಧ್ಯತೆಯ ಅನೇಕ ಲೈಂಗಿಕ ಸಂಬಂಧಗಳನ್ನು ತಿರಸ್ಕರಿಸಿಯೋ ಅಥವಾ ಅಂಥವುಗಳ ಬಗ್ಗೆ ನಿರ್ಲಕ್ಷ್ಯ ತಾಳಿಯೋ ಮುಸುಕುಧಾರಿಗಳಾಗಿರುತ್ತವೆ.

ಸಲಿಂಗ ಸಂಬಂಧವು ಅಪರಾಧವಲ್ಲ ಎಂಬ ಅಂಶವೇ ಅನೇಕ ಸ್ಥಾಪಿತ ಸತ್ಯಗಳನ್ನು ಮುಗುಚಿ ಹಾಕುತ್ತದೆ. ಕೇವಲ ಗಂಡು–ಹೆಣ್ಣಿನ ಸಂಬಂಧ ಮಾತ್ರವೇ ಶ್ರೇಷ್ಠವೆಂಬ ಅಹಮಿಕೆಯನ್ನ, ಶಿಶ್ನ ಸೆಟೆತ ಮತ್ತು ಯೋನಿ ಒದ್ದೆಯಾಗುವಿಕೆ ಮಾತ್ರವೇ ಸಂಭೋಗದ ಔನ್ನತ್ಯಗಳೆಂಬ ಭ್ರಮೆ, ಒಂದು ಸಂಬಂಧ ಬೆಳೆಯಲು / ಉತ್ತಮಗೊಳ್ಳಲು ಲೈಂಗಿಕ ಸಂಭೋಗವು ಅನಿವಾರ್ಯವೆಂಬ ದಾರ್ಷ್ಟ್ಯಗಳನ್ನು ಸಾರಾಸಗಟಾಗಿ ತಿರಸ್ಕರಿಸುವುದು ಅನೇಕ ಹೊಸದಾರಿಗಳಿಗೆ ಅವಕಾಶಮಾಡಿಕೊಟ್ಟಿದೆ.

ಪುರುಷತ್ವ ಅಥವಾ ಪುರುಷತನವೆಂಬುದು ಅನೇಕ ಲೈಂಗಿಕ ವೈವಿಧ್ಯಗಳನ್ನು ಸರಳೀಕರಣಗೊಳಿಸುವದರ ಮೂಲಕ ಅನೇಕ ಭ್ರಮೆಗಳನ್ನು ಸೃಷ್ಟಿಸುತ್ತಿದೆ. ಪ್ರೀತಿಸುವ ಕ್ರಮದ ಶಿಕ್ಷಣವನ್ನು ಮಕ್ಕಳಿಗೆ ನೀಡುವಾಗ ಹೆಚ್ಚಾಗಿ ಒತ್ತು ನೀಡುವುದು ಗಂಡು–ಹೆಣ್ಣಿನ ಪ್ರೇಮಕ್ಕೆ. ಭಾವನಾತ್ಮಕವಾಗಿ ಇಂತಹದೊಂದು ಅನಿವಾರ್ಯತೆಯು ಸೃಷ್ಟಿಯಲ್ಲಿರುವ ಅನೇಕ ತರಹದ ಭಾವನಾತ್ಮಕ ಸಂಬಂಧಗಳ ಕಿಟಕಿಗಳಿಗೆ ಪರದೆ ಎಳೆದು ಬಿಡುತ್ತವೆ. ಅನೇಕ ಸಹಜತೆಗಳಲ್ಲಿ ಗಂಡು–ಹೆಣ್ಣಿನ ಸಂಬಂಧವೂ ಒಂದು ತರಹದ್ದು ಎನ್ನುವುದಕ್ಕಿಂತ ಇದೇ ಅನಿವಾರ್ಯ ಎನ್ನುವ ಕಟ್ಟುಪಾಡುಗಳ ಹೇರಿಕೆ ಅಹಂಕಾರವೆನಿಸದೆ ಇರಲಾರದು.

ಇಂತಹದೊಂದು ದಮನಕಾರಿ ಸಂಸ್ಕೃತಿಯನ್ನು ಅನಿವಾರ್ಯಗೊಳಿಸಿದರೆ ನಷ್ಟ ಕೇವಲ ಸಲಿಂಗ ಸಂಬಂಧ ಹೊಂದಿದವರಿಗೆ ಮಾತ್ರವೇ ಅಲ್ಲ ಎಂಬುದನ್ನು ಅರಿಯುವ ಅವಶ್ಯಕತೆಯಿದೆ. Lisa Appignanesi ಎಂಬುವವರು ಸ್ತ್ರೀತ್ವ ಮತ್ತು ಸೃಜನಶೀಲತೆಯ ನಡುವೆ ಇರುವ ಹೆಚ್ಚಿನದಾದ ಸಂಬಂಧವನ್ನು ಆಧುನಿಕತೆಯ ಲಕ್ಷಣವನ್ನಾಗಿ ಗುರುತಿಸುತ್ತಾರೆ ಮತ್ತು ಈ ಸ್ತ್ರೀತ್ವದ ಲಕ್ಷಣಗಳು ಕೇವಲ ಜೈವಿಕ ಸ್ತ್ರೀಗೆ ಸೀಮಿತವಲ್ಲ ಎಂಬುದು ಅವರ ಅಭಿಮತ. Edward Carpenter ಅವರು ಸಲಿಂಗಕಾಮವನ್ನು ಕ್ರಿಯೇಟಿವ್ ಮತ್ತು ಸ್ವತಂತ್ರಗೊಂಡ ಸ್ಥಿತಿಯೆಂದು ತೀವ್ರವಾಗಿ ಪ್ರತಿಪಾದಿಸುತ್ತಾರೆ.

ಇಂತಹ ಸಂಬಂಧಗಳು ಸಾಮಾನ್ಯವಾಗಿ ಲೈಂಗಿಕ ಸ್ವೇಚ್ಛಾಚಾರಗಳೆಂದು brand ಆಗಿಬಿಡುವುದು ವಿಷಾದನೀಯ. ಆದರೆ ಇಲ್ಲಿ ಮುಖ್ಯವಾಗುವುದು ಲೈಂಗಿಕತೆಯ ವೈವಿಧ್ಯಮಯ ಸ್ವತಂತ್ರ ಅಭಿವ್ಯಕ್ತಿಗಳನ್ನು ತೋರ್ಪಡಿಸುವ ಮತ್ತು ಅನುಭವಿಸುವ ಅವಕಾಶ ಮತ್ತು ಅವುಗಳನ್ನು ಒಪ್ಪಿಕೊಳ್ಳುವ ಮನೋಭಾವ.

ಕಾನೂನಿನ ಮೂಲಕ ದೊರಕಿರುವ ಈ ಸ್ವಾತಂತ್ರ್ಯ ನಮ್ಮ ಸಮಾಜದ ತಿಳಿವಳಿಕೆಗೆ ಇಳಿದು ಮಾನವ ಸಂಬಂಧಗಳಲ್ಲಿ ಅಡಕವಾದರೆ ಕವಿವಾಣಿಯಂತೆ ಪ್ರೇಮವೆಂದರೆ ಧನ್ಯಭಾವವಲ್ಲದೇ ಮತ್ತೇನು ಉಳಿದೀತು!

● ಕೆ.ಬಿ. ಸರಸ್ವತಿ

# ಮಹಿಳೆಯರು ಮತ್ತು ಆಧ್ಯಾತ್ಮಿಕತೆ : ಸ್ಥಾನ ನಿರ್ದೇಶನ ರಾಜಕೀಯ ಕುರಿತ ಚಿಂತನೆಗಳು

● ಪ್ರೊ. ಎನ್. ಮನು ಚಕ್ರವರ್ತಿ

*ಮದ್ರಾಸ್ ವಿಶ್ವವಿದ್ಯಾಲಯದ ಕ್ರಿಶ್ಚಿಯನ್ ಅಧ್ಯಯನಗಳ ವಿಭಾಗವು ಯುಜಿಸಿ ನೆರವಿನಿಂದ* ***'Women and Sprituality'*** *ಎಂಬ ವಿಷಯವನ್ನು ಕುರಿತು ರಾಷ್ಟ್ರಮಟ್ಟದ ಸೆಮಿನಾರ್ ಒಂದನ್ನು 2003ರಲ್ಲಿ ಏರ್ಪಡಿಸಿತ್ತು. ಆ ಸೆಮಿನಾರಿನ ಆಶಯ ಭಾಷಣದ ರೂಪದಲ್ಲಿ ಪ್ರೊ. ಮನು ಚಕ್ರವರ್ತಿಯವರು ಪ್ರಸ್ತುತ ಪಡಿಸಿದ ಇಂಗ್ಲಿಷ್ ಪ್ರಬಂಧದ ಕನ್ನಡಾನುವಾದ ಇದು. ಈ ಲೇಖನಕ್ಕೆ ಚಿಂತನಶೀಲ ಲೇಖಕ ಲೇಖಕಿಯರ ಪ್ರತಿಕ್ರಿಯೆಯನ್ನು 'ನಮ್ಮ ಮಾನಸ'ವು ಆಹ್ವಾನಿಸಿತ್ತು. ನಮ್ಮ ಆಹ್ವಾನವನ್ನು ಮಾನ್ಯ ಮಾಡಿ ಆ ರೀತಿ ಪ್ರತಿಕ್ರಿಯೆಗಳನ್ನು ಕಳುಹಿಸಿಕೊಟ್ಟಿರುವ ಡಾ॥ ಜಿ. ರಾಮಕೃಷ್ಣ, ಸ. ಉಷಾ, ಡಾ॥ ಆಶಾದೇವಿ ಅವರಿಗೂ ಲೇಖನವನ್ನು ಅನುವಾದಿಸಿ ಪ್ರಕಟಿಸಲು ಒಪ್ಪಿ ಒದಗಿಸಿಕೊಟ್ಟ ಪ್ರೊ. ಮನು ಚಕ್ರವರ್ತಿಯವರಿಗೂ 'ನಮ್ಮ ಮಾನಸ' ಕೃತಜ್ಞವಾಗಿರುತ್ತದೆ.*

**ಈ** ಪ್ರಬಂಧದಲ್ಲಿ ನಾನು "ಆಧ್ಯಾತ್ಮಿಕತೆ" ಎಂಬ ಶಬ್ದದ ಬಳಕೆಯಲ್ಲಿ ಒಳಗೊಂಡಿರುವ ತೊಂದರೆಗಳ ಕಡೆಗೆ ಗಮನ ಸೆಳೆಯಲು ಪ್ರಯತ್ನಿಸುತ್ತೇನೆ, ಆ ಶಬ್ದಕ್ಕೆ ಸಮರ್ಪಕವಾದ ಗುಣಗಳನ್ನು ಒದಗಿಸಿ ಸಮಸ್ಯೆಯನ್ನು ನಿವಾರಿಸಿಕೊಂಡ ಮೇಲೂ ಆ ಶಬ್ದದ ಬಗ್ಗೆ ಕಿಂಚಿತ್ತೂ ಶ್ರದ್ಧೆಯಿರದ ಜನರಿಂದ ನಿರ್ಮಿತವಾಗುತ್ತಿರುವ ತೊಡಕುಗಳನ್ನು ಆ ಶಬ್ದವು ಹೊಂದಿರುತ್ತದೆ. "ಆಧ್ಯಾತ್ಮಿಕತೆ" ಎಂಬ ಶಬ್ದದೊಳಗೇ ಅಂತರ್ಗತವಾಗಿರುವ ವಿರೋಧಾತ್ಮಕ ಅಂಶಗಳನ್ನು ಮತ್ತು ಅದರ ಚೌಕಟ್ಟಿನ ಆಚೆಗಿನ ಜಾಗಗಳಲ್ಲಿ ಇರುವವರಿಂದ ಅದು ಎದುರಿಸುತ್ತಿರುವ ಸವಾಲುಗಳನ್ನೂ ಕುರಿತು ಒಂದು ಒಪ್ಪಂದಕ್ಕೆ ಬರುವ ಯತ್ನ ಈ ನನ್ನ ಪ್ರತಿಪಾದನೆಯದಾಗಿದೆ. ಹೇಗಾದರೂ "ಆಧ್ಯಾತ್ಮಿಕತೆ" ಎಂಬುದು ಬಹುಸ್ತರದ ನೆಲೆಗಳುಳ್ಳದ್ದು ಎಂಬುದನ್ನು ನಾನು ಸ್ಪಷ್ಟವಾಗಿ ಹೇಳಬೇಕಿದೆ. ಒಂದೊಂದಾಗಿ ಅವುಗಳನ್ನು ಇಲ್ಲಿ ಹೇಳಲೆತ್ನಿಸುತ್ತೇನೆ.

**1. ಸಮಸ್ಯೆಗಳ ಮತ್ತು ವಿವಾದಾಂಶಗಳ ರೇಖಾನಕಾಶೆ:**

ಆಧ್ಯಾತ್ಮಿಕತೆಯ ಅನುಭವಕ್ಕೆ ಎದುರಾಗುವ ಬಹುಮುಖ್ಯ ಸವಾಲು ಇಂದ್ರಿಯಾತೀತವಾದ ವಿಷಯಗಳ ಬಗ್ಗೆ ಬಲವಾದ ಪ್ರಶ್ನೆಗಳನ್ನುಳ್ಳ ವಿಚಾರವಾದಿ/ಧರ್ಮನಿರಪೇಕ್ಷಿಯಾದ ಪರಂಪರೆಯಿಂದ ಹುಟ್ಟಿರುವಂಥದು. "ಆಧ್ಯಾತ್ಮಿಕತೆ" ಎಂಬ ಶಬ್ದಕ್ಕೆ ಹೊಂದಿಕೊಂಡಿರುವ ಲೋಕಾತೀತ ಅನುಭವವನ್ನು ಅದರ ಅಧಿಕಾರವ್ಯಾಪ್ತಿಯ ಹೊರಗಿನಿಂದ ಪ್ರಶ್ನಿಸಲಾಗುತ್ತಿದೆ ಎನ್ನುವುದನ್ನು ನಾನು ಮೊದಲನೆಯದಾಗಿ ಸ್ಪಷ್ಟಪಡಿಸುವುದು ಒಳ್ಳೆಯದು. ಹೀಗೆ ಇಲ್ಲಿ ಸಮಸ್ಯೆಯ ಬೇರು ಇರುವುದು "ವಾಸ್ತವ ರಾಜಕೀಯ" ಪ್ರಪಂಚದಲ್ಲೇ ಹೊರತು ಕೇವಲ ಭಾಷಾಶಾಸ್ತ್ರೀಯವಾಗಿ ಅಲ್ಲ.

ಎರಡನೆಯದಾಗಿ "ಆಧ್ಯಾತ್ಮಿಕತೆ"ಯ ಅನುಭವಕ್ಕೆ, ಅದನ್ನು ಅನೇಕ ಸ್ತ್ರೀವಾದಿಗಳು ಸ್ವತಃ ತಿರಸ್ಕರಿಸುತ್ತಾರೆಂಬ ಅರ್ಥದಲ್ಲಿ, ಅದರ 'ಒಳಗಿನಿಂದ'ಲೂ ಪ್ರಶ್ನೆಗಳು ಹುಟ್ಟುತ್ತವೆ ಎಂಬುದನ್ನೂ ಇಲ್ಲಿ ಸೇರಿಸುವುದು ಉಚಿತವಾಗುತ್ತದೆ. ಪುರುಷರು ಮತ್ತು ಸ್ತ್ರೀಯರು ವಿರೋಧಿ ದ್ವಿತ್ವಗಳು ಎಂಬ ಸಾಮಾನ್ಯ ಗ್ರಹಿಕೆಗೆ ಭಿನ್ನವಾಗಿ ಕೊನೆಯ ಪಕ್ಷ ಈ ಹಂತದಲ್ಲಾದರೂ ವೈರುಧ್ಯವಿರುವುದು ಪುರುಷರು ಮತ್ತು ಸ್ತ್ರೀಯರ ನಡವೆ ಅಲ್ಲ; ಈ ಶಬ್ದವನ್ನು ಕುರಿತು ಬಲವಾದ ಪ್ರಶ್ನೆ ಏಳುವುದು ಮಹಿಳೆಯರ ವಿಚಾರವಾದಿ/ಧರ್ಮನಿರಪೇಕ್ಷಿ ಜಗತ್ತಿನ ಒಳಗೆ ಎಂಬುದನ್ನು ಗುರುತಿಸಬೇಕಿದೆ.

ಆಧ್ಯಾತ್ಮಿಕ ನೆಲೆಯ ಒಳಗೇ ನಿರ್ಮಾಣವಾಗುವ ಒಂದು ದೊಡ್ಡ ಸಮಸ್ಯೆ ಎಂದರೆ ಅದರ ಗೌಪ್ಯತೆಯದು. ಆಧ್ಯಾತ್ಮಿಕ ಮೂಲದ್ರವ್ಯವನ್ನು ಹೇಗೆ ವಿವರಿಸಲಾಗುತ್ತದೆ, ಅರ್ಥಮಾಡಿಕೊಳ್ಳಲಾಗುತ್ತದೆ ಹಾಗೂ ಸಿದ್ಧಿಸಿಕೊಳ್ಳಲಾಗುತ್ತದೆ ಎನ್ನುವುದು ಅದರ ಚಾರಿತ್ರಿಕ ಮತ್ತು ರಾಜಕೀಯ ಸಂದರ್ಭಕ್ಕೆ ಹೊರಗಿನ ನೆಲೆಯಲ್ಲಿರುತ್ತದೆ. ಆದ್ದರಿಂದ "ಆಧ್ಯಾತ್ಮಿಕ" ಎಂಬುದು ಸಾಮಾನ್ಯವಾಗಿ ಚರಿತ್ರಾತೀತ, ರಾಜಕೀಯಾತೀತ ಘಟಕವಾಗಿರುತ್ತದೆ. ನಿಜವಾಗಿ ಹೇಳುವುದಾದರೆ, ಸ್ತ್ರೀವಾದದ ಗಡಿಗಳ ಒಳಗಿನಿಂದ ಎದುರಾಗುವ ಸಮಸ್ಯೆಗಳಷ್ಟೇ ಅಲ್ಲದೆ ತತ್ತ್ವಶಾಸ್ತ್ರದ ಪ್ರಧಾನ ಪರಂಪರೆ ಕೂಡ ಆಧ್ಯಾತ್ಮವಾದಿಗಳು ಮತ್ತು ಅದರ ಗಂಭೀರ ವಿರೋಧಿಗಳ ನಡುವಿನ ವಾದ-ವಿವಾದಗಳನ್ನು ಮುಂದಿಡುತ್ತದೆ. ಆಧ್ಯಾತ್ಮಿಕ ಘಟಕದ ಅತ್ಯಂತ ಅಮೂರ್ತ ಲಕ್ಷಣಕ್ಕೆ ಎದುರಾಗುವ ತೀವ್ರವಾದ ವಿರೋಧವು, ಕೊನೆಯ ಪಕ್ಷ ಪರಂಪರೆಗೆ ಸಂಬಂಧಿಸಿದಂತೆ, ವ್ಯಕ್ತವಾಗಿರುವುದು ಬೌದ್ಧರಿಂದ. ಅವರು ಮಾನವ ಜೀವಿಗಳ ಯಾತನೆ ಹಾಗೂ ದುಃಖಗಳಿಗೆ ಉದಾಸೀನವಾಗಿರುವ ತೀರಾ ಅಮೂರ್ತ ವಸ್ತು 'ಆಧ್ಯಾತ್ಮ' ಎಂದು ಪರಿಗಣಿಸುತ್ತಾರೆ.

ವ್ಯತ್ಯಾಸವೆಂದರೆ, ಅಮೂರ್ತವಾಗಿ ಉಳಿಯುವುದು, ಅದರಲ್ಲೂ ಬದುಕಿನ ಸಂಕಷ್ಟಗಳಲ್ಲಿ, ತೀರಾ ಸುಲಭ. ಆಧ್ಯಾತ್ಮಿಕ ಅಥವಾ ಇಂದ್ರಿಯಾತೀತ ಇಲ್ಲವೆ ಅನುಭಾವ ಎನ್ನುವುದು ಪ್ರಜ್ಞಾಪೂರ್ವಕವಾಗಿ ಮತ್ತು ಅಪ್ರಜ್ಞಾಪೂರ್ವಕವಾಗಿಯೂ ಒಂದು ರೀತಿಯ ವಿರಕ್ತಿಯನ್ನು ಬೋಧಿಸುತ್ತದೆ. ಬದುಕಿನ ಹೊರೆಗಳ ಬಗ್ಗೆ ಒಬ್ಬರು ತೀಕ್ಷ್ಣವಾದ ಪ್ರಜ್ಞೆಯನ್ನು ಹೊಂದಿದ್ದಾಗ ಈ ಬಗೆಯ ವೈರಾಗ್ಯವು ಮೌಲಿಕವಾಗಿ ಇರಲೇಬೇಕೆಂದೇನೂ ಇಲ್ಲ.

ಸ್ತ್ರೀವಾದಿ ದೃಷ್ಟಿಕೋನವು ಈ ಆಧ್ಯಾತ್ಮಿಕ ಅನುಭವಕ್ಕೆ ಭಿನ್ನವಾದ ವಿಮರ್ಶೆಯನ್ನು ನೀಡುತ್ತದೆ. ಆಧ್ಯಾತ್ಮಿಕ ನಿಲುವಿನ ವಿರುದ್ಧವಾಗಿರುವ ವಾದವೆಂದರೆ ಅದು ತನ್ನನ್ನು ಸ್ಪಷ್ಟವಾಗಿ ರೂಪಿಸಿರುವ ಊಳಿಗಮಾನ್ಯ ಪಿತೃಪ್ರಧಾನ ಮೌಲ್ಯಗಳನ್ನೇ ಉತ್ಪಾದಿಸಬಹುದು ಎನ್ನುವುದು. ಆಧ್ಯಾತ್ಮಿಕ ಕೇಂದ್ರದ ಮೂಲಗಳನ್ನು ಮಹಿಳೆಯ ಅಸ್ತಿತ್ವವನ್ನೂ ಸಮಾವೇಶಗೊಳಿಸಿಕೊಂಡಿರುವ ಅಧಿಕಾರಶಾಹಿ ಪಿತೃಪ್ರಧಾನ ಮೌಲ್ಯಗಳಲ್ಲಿ ಗುರುತಿಸಲಾಗುತ್ತದೆ. ಇಂತಹ ಮೂಲಗಳಿಂದಾಗಿ ಆಧ್ಯಾತ್ಮಿಕತೆ ಎನ್ನುವುದು ಪುರುಷನನ್ನು ಹೆಚ್ಚು ಹೆಚ್ಚು ಬಲಪಡಿಸುತ್ತಾ ಪಿತೃಪ್ರಾಧಾನ್ಯದ ಆರಾಧನೆಯನ್ನಷ್ಟೇ ಉತ್ಪಾದಿಸುತ್ತಿರುತ್ತದೆ ಎಂಬ ಸ್ತ್ರೀವಾದಿ ನಿಲುವು ಒಂದು ಪುರುಷ ತತ್ತ್ವದ ಜೊತೆ ಅಧೀನ ನೆಲೆಯಿಂದ ಪರಾಮರ್ಶಿಸದೆ ತನ್ನ ಆತ್ಮವನ್ನು ಸಂಬೋಧಿಸುವುದು ಮಹಿಳೆಗೆ ಸಾಧ್ಯವೇಇಲ್ಲವೆಂದು ವಾದಿಸುತ್ತದೆ. ಪರಿಣಾಮವೆಂದರೆ 'ಆಧ್ಯಾತ್ಮ' ಎಂಬುದು ಒಂದು ಅಧೀನಕಾರರ ಶಕ್ತಿಯಾಗಿದ್ದು ಅದನ್ನು ತಿರಸ್ಕರಿಸುವುದೇ ಒಳಿತೆಯದೆಂದು ಪರಿಗಣಿಸಲಾಗುತ್ತದೆ.

ಉದಾಹರಣೆಗೆ, ಭಾರತದ ತೀವ್ರಗಾಮಿ ಸ್ತ್ರೀವಾದಿಗಳು ಅಕ್ಕಮಹಾದೇವಿ ಮತ್ತು ಮೀರಾಬಾಯಿಯರ ಆಧ್ಯಾತ್ಮಿಕತೆಯ ಅಂಶಗಳು ತಮ್ಮೊಳಗಿನ 'ಯಜಮಾನ'ನನ್ನು ಪ್ರಾರ್ಥಿಸುವುದರಲ್ಲಿ ಪುರುಷನ ಶ್ರೇಷ್ಠ ನೆಲೆಯನ್ನು, ಬಹುಶಃ ಪಿತೃಪ್ರಾಧಾನ್ಯವನ್ನು ಸ್ವೀಕರಿಸುವುದೇ ಆಗಿರುತ್ತದೆಂದು ವಾದಿಸುತ್ತಾರೆ. ಅಕ್ಕನು ಚೆನ್ನಮಲ್ಲಿಕಾರ್ಜುನದೇವನಿಗೆ, ಮೀರಾ ಕೃಷ್ಣನಿಗೆ ಶರಣಾಗುವ ಮಾತನ್ನಾಡುವಾಗ ಅದು "ಪುರುಷನ" ಜಾಗವನ್ನು ಸವಲತ್ತುಗೊಳಿಸುವುದಕ್ಕಿಂತ ಬೇರೆಯಲ್ಲ ಎಂದು ಈ ಸ್ತ್ರೀವಾದಿಗಳು ವಾದಿಸುತ್ತಾರೆ. ಇದು ಎಲ್ಲ ಪಿತೃಪ್ರಧಾನ ವ್ಯವಸ್ಥೆಗಳೂ ಮಹಿಳೆಯ ಪ್ರಜ್ಞೆಗೆ ಮಾಡುತ್ತ ಬಂದಿರುವ ರೀತಿಯದೆ. ಆದ್ದರಿಂದ ತೀವ್ರಗಾಮಿ ಸ್ತ್ರೀವಾದಿ ನಿಲುವಿನ ಪ್ರಕಾರ ಆಧ್ಯಾತ್ಮವು ನಿರ್ಣಾಯಕವಾದ ಪಿತೃಪ್ರಾಧಾನ್ಯದ ಸಾಂಸ್ಕೃತಿಕ ರಾಜಕೀಯದಲ್ಲಿ ಸ್ಥಾನ ನಿರ್ದೇಶನ ಹೊಂದಿರುತ್ತದೆ.


ಮೀರಾಬಾಯಿ

ಆಧ್ಯಾತ್ಮಿಕತೆಯ ಬಗೆಗಿನ ಗ್ರಹಿಕೆಗಳು, ಅನುಭವಗಳಿಗೆ ಸಂಬಂಧಿಸಿದಂತೆ "ಅಂತರ್ಗತವಾದ ಅಪಾಯಗಳ" ನಿದರ್ಶನಗಳನ್ನು ಒದಗಿಸುವ ಮೂಲಕ ನಾನು ಆಧ್ಯಾತ್ಮಿಕ ನಿಲುವುಗಳ ಇನ್ನೂ ಎರಡು ಬಗೆಯ ಪ್ರತಿನಿಧೀಕರಣದ ಕಡೆಗೆ ತೆರಳುತ್ತೇನೆ. ಅದಾದ ನಂತರ ಆಧ್ಯಾತ್ಮಿಕ ಘಟಕದಲ್ಲಿ ನಿಶ್ಚಿತವಾಗಿ ಒಂದು ರಾಜಕೀಯ ನೆಲೆ ಇದೆ. ಅದು ತೀವ್ರಗಾಮಿ ಸ್ತ್ರೀವಾದಿಗಳ ಸಂಕುಚಿತಗೊಳಿಸುವ ರಾಜಕೀಯಕ್ಕೆ ಸವಾಲೊಡ್ಡುತ್ತದೆ. ಅಷ್ಟೇ ಅಲ್ಲ; ಧರ್ಮನಿರಪೇಕ್ಷ / ವಿಚಾರವಾದಿ ಪರಂಪರೆಗಳು ಸೃಷ್ಟಿಸಿರುವ ನಿಷ್ಪತ್ತಿಗಿಂತ ಸಂಪೂರ್ಣವಾಗಿ ಭಿನ್ನವಾದ ನಿಷ್ಪತ್ತಿಯನ್ನು ರೂಪಿಸಲು ಅದು ನಮಗೆ ಹಾದಿ ತೋರಿಸಬಹುದು ಎಂದು ನನ್ನ ವಾದವಿದೆ. ಅದು ಹೇಗೇ ಇರಲಿ, ಆಧ್ಯಾತ್ಮವಾದಿ ಅನುಭವಗಳು ವಿಶ್ವಾತ್ಮಕ ಧೋರಣೆಗಳನ್ನು, ತಾತ್ತ್ವಿಕತೆಗಳನ್ನು, ವಿಚಾರಗಳನ್ನು ಅಪ್ಪಿಕೊಳ್ಳಲಿಕ್ಕಾಗಿ ಐಹಿಕ ಪ್ರಶ್ನೆಗಳನ್ನು ಮೀರಿ ಹೋಗುತ್ತವೆ ಎಂದು ಅರ್ಥವಲ್ಲ. ತದ್ವಿರುದ್ಧವಾಗಿ ತೀವ್ರಗಾಮಿಗಳ ಧರ್ಮನಿರಪೇಕ್ಷ / ವೈಚಾರಿಕ ನಿಲುವುಗಳಿಗೆ ಉತ್ತರಿಸುವುದಕ್ಕೆ ಯಾವುದನ್ನೂ ಹೊರದೂಡದ, ಎಲ್ಲವನ್ನೂ ಒಳಗೊಳ್ಳಬಲ್ಲ ರೀತಿಯಲ್ಲಿ ಮನನ ಮಾಡಿಸಬಲ್ಲ ಸಾಂಸ್ಕೃತಿಕ ರಾಜಕೀಯವೊಂದನ್ನು ನಿರ್ಮಿಸಬೇಕಾಗಿದೆ. ಈ ಸಾಂಸ್ಕೃತಿಕ ರಾಜಕೀಯ ತನ್ನನ್ನು ನಿರ್ವಚಿಸಿಕೊಳ್ಳುವಲ್ಲಿ ಅಥವಾ 'ವಾಸ್ತವ ರಾಜಕೀಯ'ದ ಸಮಸ್ಯೆಗಳನ್ನು ಸಂಬೋಧಿಸುವುದರಲ್ಲಾಗಲಿ ಸಂಕುಚಿತವಾದಿಯಾಗಿರುವುದಿಲ್ಲ. ಈ ನಿಲುವಿಗೆ ಬಲವಾಗಿ ಸೇರಿಕೊಂಡಿರುವ ಅತ್ಯಂತ ಪ್ರಮುಖ ಅಂಶವೆಂದರೆ ಎಲ್ಲ ದಿಕ್ಕುಗಳಿಂದ ಹೊಮ್ಮಿ ಬರುವ ನಿಲುವುಗಳನ್ನು, ಅವು ಎಂತಹ ಕೇಂದ್ರದಿಂದ ಬಂದಿವೆ ಎಂಬುದನ್ನು ಲೆಕ್ಕಿಸದೆಯೆ ಪೂರ್ಣವಾಗಿ ಮುಖಾಮುಖಿಯಾಗುವ ಕಡೆಗೆ ಅದು ನಮ್ಮನ್ನು ಕರೆದೊಯ್ಯಬಲ್ಲದು. ಮಹತ್ವದ್ದೆಂದರೆ ಇಂಥದೊಂದು ನಿಲುವು ಆತ್ಯಂತಿಕತಾವಾದಿ ಹೇಳಿಕೆಗಳು ಮತ್ತು ಸಮರ್ಥನೆಗಳನ್ನು ಮೀರಿ ಹೋಗಲು ಯತ್ನಿಸುವ ವೈಯಕ್ತಿಕೀಕೃತರಾದವರಿಗೆ ಅತ್ಯವಶ್ಯಕವಾದ ಸ್ವ-ವಿಮರ್ಶೆಯ ಆಯಾಮವೊಂದನ್ನು ಬೆಳೆಸಬಲ್ಲದು. ಇಂಥ ಸ್ವ-ವಿಮರ್ಶಕ ಘಟಕವನ್ನು ವಿವರವಾಗಿ ಅರ್ಥಮಾಡಿಕೊಳ್ಳಬೇಕಿದ್ದು, ಅದಕ್ಕೆ ನಾನು ಮುಂದೊಂದು ಹಂತದಲ್ಲಿ ಪ್ರಯತ್ನ ಮಾಡುತ್ತೇನೆ.

ಅಕ್ಕಮಹಾದೇವಿ ಒಬ್ಬ ಚಾರಿತ್ರಿಕ ಆಕೃತಿಯಾಗಿರುವುದರಿಂದಾಗಿಯೇ ಈ ಇಡಿಯ ವಾದಕ್ಕೆ ಬಲವಾದ ಚಾರಿತ್ರಿಕ ಆಯಾಮವೊಂದು ಒದಗುವುದಾದರೆ, ಸಾಂಸ್ಕೃತಿಕ ಮತ್ತು ಸಾಹಿತ್ಯಕ ಕಥನಗಳಿಂದಲೂ "ಐತಿಹಾಸಿಕ" ಘಟಕವನ್ನು ನಿರೂಪಿಸುವುದು ಸಾಧ್ಯ. ಆ ಮೂಲಕವಾಗಿ ಆಧ್ಯಾತ್ಮಿಕತೆಯ ನಿಲುವಿನ ರಾಜಕೀಯವನ್ನು ವಿಸ್ತರಿಸಲು ಸಾಧ್ಯ. ಬೇರೆ ರೀತಿ ಹೇಳುವುದಾದರೆ ಕೇವಲ ಚಾರಿತ್ರಿಕ ಆಕೃತಿಗಳು ಹಾಗೂ ಘಟನೆಗಳಷ್ಟೇ ಆಧ್ಯಾತ್ಮಿಕತೆಯ ಐತಿಹಾಸಿಕ ರೂಪಾಕೃತಿಯನ್ನು ರಚಿಸುತ್ತಿರುವುದಿಲ್ಲ; ಅನೇಕ ಬಗೆಯ ಕಾಲ್ಪನಿಕ ಹಾಗೂ ಊಹಾತ್ಮಕ ಕಥನಗಳೂ ಅದನ್ನು ರಚಿಸುತ್ತಿರುತ್ತವೆ.

ನನ್ನ ಈ ವಾದಕ್ಕೆ ನಿದರ್ಶನವಾಗಿ ನಾನು ಎರಡು ವಿಭಿನ್ನ ಸಾಂಸ್ಕೃತಿಕ ಸಂಕಥನಗಳನ್ನು ಬಳಸಿಕೊಳ್ಳುವ ಮೂಲಕ ಅವು ಸಮಸ್ಯೆಗಳನ್ನು ಯಾವ ರೀತಿಗಳಲ್ಲಿ ಪ್ರತಿನಿಧಿಸುತ್ತವೆಂದು ತೋರಿಸುವ ಯತ್ನಮಾಡುತ್ತೇನೆ. ಈ ಎರಡೂ "ಪಠ್ಯ"ಗಳು ಒಂದರಿಂದೊಂದು ಭಿನ್ನ ಮಾತ್ರವಲ್ಲ, ಈ ಸಮಸ್ಯೆಯ ಕೇಂದ್ರವಾಗುವ ಎರಡು ವಿಭಿನ್ನ ದೃಷ್ಟಿಕೋನಗಳಿಂದ ಅವು ಪ್ರಶ್ನೆಯನ್ನು ಪರಿಶೀಲಿಸುತ್ತವೆ ಎಂಬುದನ್ನು ಇಲ್ಲಿ ಹೇಳಬೇಕು.

ಮೊದಲಿಗೆ ನಾನು ಆರಿಸಿಕೊಂಡಿರುವ ಉದಾಹರಣೆ ಸತ್ಯಜಿತ್ ರಾಯ್ ಅವರ 'ದೇವಿ' ಚಲನಚಿತ್ರ. ತನ್ನ ಸೊಸೆಯನ್ನು 'ದೇವಿ'ಯ ಅವತಾರವೇ ಎಂದು ನಂಬಿರುವ ಒಬ್ಬ ಮಾವನ ದರ್ಶನಗಳ ಸುತ್ತಲೂ ಸಾಗುವ ಚಲನಚಿತ್ರ ಇದು. ಅವನ ಆವೇಶದ ಉದ್ಗಾರಗಳಲ್ಲಿ ಅವನು ಒಬ್ಬ ಸಾಧಾರಣ, ಆರೋಗ್ಯವಂತ, ಜೀವಂತಿಕೆಯ ಹೆಣ್ಣಾದ (ತನ್ನ)



ಸೊಸೆಯ ದೈವತ್ವವನ್ನು ವೈಭವೀಕರಿಸತೊಡಗುತ್ತಾನೆ. ಅವನ ನಂಬಿಕೆಗಳ ತೀವ್ರತೆ ಎಷ್ಟು ಬಲವಾದದ್ದು ಮತ್ತು ಮನವೊಲಿಸುವಂಥಾದ್ದು ಎಂದರೆ ಆ ಸೊಸೆಯೂ ಅವನ ದಾರ್ಶನಿಕ ನಂಬಿಕೆಗಳ ಶಕ್ತಿಯನ್ನು ಕ್ರಮವಾಗಿ ತನ್ನೊಳಗೂ ಸೇರಿಸಿಕೊಳ್ಳುವಂತೆ ಆಗುತ್ತದೆ. ಕೊನೆಯಲ್ಲಿ ಆ ಹುಡುಗಿ ಎಲ್ಲ ಭೌತಿಕ ಅವಯವಗಳೂ ಕೆಲಸ ಮಾಡುತ್ತಿರುವ ಸಾಮಾನ್ಯ ಮಾನವಳು ತಾನಲ್ಲ, ಚೈತನ್ಯರೂಪಿಯಾದ ದೇವಿಯೇ ತಾನು ಎಂದು ನಂಬುತ್ತಾಳೆ. ಈ ನಾಟಕೀಯ ಯೋಜನೆಯಲ್ಲಿ ಭಾಗಿಯಾಗಿರದ ವಿಚಾರವಾದಿ ಒಬ್ಬನ ನಿಲುವನ್ನೂ ಚಲನಚಿತ್ರವು ತೋರಿಸುವುದಾದರೂ ಅವನು ಈ ಯಾವುದನ್ನೂ ತಡೆಗಟ್ಟಲಾರದೆ ಅಸಹಾಯಕನಾಗಿ ಉಳಿಯಬೇಕಾಗುತ್ತದೆ.

ಇಲ್ಲಿ ನಾವು ಗಮನಿಸಬೇಕಾದ್ದೆಂದರೆ ಪಿತೃಪ್ರಧಾನ ಸಾಂಸ್ಕೃತಿಕ ನಿಲುವುಗಳಿಂದ ನಿರ್ಮಿತವಾಗಿರುವ ಈ ಆಧ್ಯಾತ್ಮಿಕತೆ ಮಹಿಳೆಗೆ ಯಾವ ಆಯ್ಕೆಯ ಅವಕಾಶವನ್ನೂ ಉಳಿಸುವುದಿಲ್ಲ; ಅದು ಅವಳ ಸ್ವಂತದ ಅಸ್ಮಿತೆಯ ರಚನೆ ಎಂದು ಅವಳ ಮೇಲೆ ಹೇರಲ್ಪಟ್ಟದ್ದಾಗಿದ್ದು ಒಂದು ಸಾಮಾಜಿಕ – ಸಾಂಸ್ಕೃತಿಕ ಸಂದರ್ಭದಿಂದ ಬಲಗೊಳ್ಳುವಂಥಾದ್ದೇ ವಿನಾ ಬೇರೆಯಾಗಿ ಅಲ್ಲ.

ಮಾವನ ಮನದ ಗೀಳು ಕೇವಲ ಅಪ್ರಜ್ಞಾವಸ್ಥೆಯದು ಎಂದು ಅರ್ಥೈಸಲು ಬರುವುದಿಲ್ಲ. ಲಕಾನ್ ಹೇಳುವ ಸುಪ್ತಪ್ರಜ್ಞೆ ಇಲ್ಲಿ ಕೆಲಸ ಮಾಡುವುದಿಲ್ಲ. ತನ್ನ ಸೊಸೆಯ ಆಧ್ಯಾತ್ಮಿಕತೆಯ ವಿಷಯದಲ್ಲಿ ಮಾವನ ಮನದ ಗಟ್ಟಿಯಾದ ಭಾವನೆಯನ್ನು ಯಾವ ಪ್ರಮಾಣದ ಮನೋವಿಶ್ಲೇಷಣೆಯೂ ವಿವರಿಸಲಾರದು. ಅದನ್ನು ಸಾಂಸ್ಕೃತಿಕ ಪದಗಳ ಮೂಲಕವೇ ವಿವರಿಸಬೇಕಾಗುತ್ತದೆ. ಮತ್ತು "ದೇವಿ"ಯಂತಹ ಪಠ್ಯದ ಸಾಂಸ್ಕೃತಿಕ ರಾಜಕೀಯದ ಸ್ಥಾನವನ್ನು ಗುರುತಿಸಬೇಕಾಗುತ್ತದೆ. ಮಾವನ ಮಾನಸಿಕ ಗೀಳುಗಳು ಕೇವಲ ನರದೌರ್ಬಲ್ಯದ ಆವೇಶಗಳಲ್ಲ. ಬದಲಾಗಿ, ವಾಸ್ತವದಲ್ಲಿ ಅವು ಹೆಣ್ಣನ್ನು ಒಬ್ಬ 'ಶಕ್ತಿ'ಯೆಂದು, 'ದೇವಿ' ಎಂದು ನಂಬುವಂತಹ ಸಂಸ್ಕೃತಿಯ ವ್ಯಕ್ತಿಗತ ನಂಬಿಕೆಯ ಹೊರ ಅಭಿವ್ಯಕ್ತಿಗಳು. ಈ ಸಂಕಥನದಲ್ಲಿ ಇಡೀ ಶಾಕ್ತ ಪರಂಪರೆಯನ್ನು ಓದುವುದು ಸಾಧ್ಯ.

ತನ್ನಲ್ಲಿ ದೇವಿತನದ ಅಸ್ಮಿತೆಯೊಂದನ್ನು ರಚಿಸಿಕೊಳ್ಳುವ ಆ ಹೆಣ್ಣೂ ಅದೇ ಸಂಸ್ಕೃತಿಯದೇ ಒಂದು ವೈಲಕ್ಷಣ್ಯವಾಗಿರುತ್ತಾಳೆ. ಅದು ಬರಿಯ ಮಾನಸಿಕ ಭ್ರಮೆಯೋ ಅಥವಾ ಆವೇಶವಷ್ಟೆಯೋ ಅಲ್ಲ. ಒಂದು ಇಡೀ ಸಂಸ್ಕೃತಿ ಹೆಣ್ಣನ್ನು ನಿರ್ಲೈಂಗಿಕವಾಗಿಸುವ ಮುಖಾಂತರ ಅವಳನ್ನೂ ಅವಳ ಶರೀರವನ್ನೂ ಗೌರವಿಸಲಾರದಂಥ ದಾರ್ಶನಿಕ ಪದಗಳಲ್ಲಿ ಅವಳನ್ನು ಎರಕಹೊಯ್ದು ಒಬ್ಬ ದೇವಿಯನ್ನು ಕಟ್ಟುತ್ತದೆ ಎಂಬುದನ್ನು ಸತ್ಯಜಿತ್ ರಾಯ್ ತೋರಿಸುತ್ತಾರೆ. ಈ ವಿಷಯದಲ್ಲಿ ಆಧ್ಯಾತ್ಮಿಕತೆ ಎಂಬುದು ಮಹಿಳೆಯ ಶುದ್ಧಾಂತ ಚೈತನ್ಯಮಯ 'ದೇವೀ'ತ್ವಕ್ಕೆ ವಿರೋಧಿಯೆನಿಸುವ ಅವಳ ದೇಹವನ್ನು ಹೆಚ್ಚು ಕಡಿಮೆ ಪೂರ್ತಿಯಾಗಿ ನಿರಾಕರಿಸುತ್ತದೆ. ಇಲ್ಲಿ ಆಶ್ಚರ್ಯವೆಂದರೆ ಮಾವನಂಥ ಹೊರಗಿನ ಏಜೆನ್ಸಿಯೊಂದು ಆ ಹೆಣ್ಣಿನ ಪ್ರಜ್ಞೆಯೊಳಗೂ ಸ್ವತಃ ಕ್ರಿಯಾಶೀಲವಾಗಿರುತ್ತದೆ. ಅದನ್ನು ತನ್ನ ಒಳಗಾಗಿಸಿಕೊಳ್ಳುವ ಮೂಲಕ ಆಕೆ ಆ ಏಜೆನ್ಸಿಯು ಎತ್ತಿಹಿಡಿಯುವ ಎಲ್ಲಾ ಅಂಶಗಳನ್ನೂ ಅಂತರ್ಗತವಾಗಿಸಿಕೊಳ್ಳುತ್ತಾಳೆ. ಆದ್ದರಿಂದ ಆಧ್ಯಾತ್ಮಿಕ ಮಹಿಳೆ ಎನ್ನುವುದು ಸಾಂಸ್ಕೃತಿಕ ವ್ಯವಸ್ಥೆಯ ಒಂದು ಕಟ್ಟೋಣವೇ ಹೊರತು ತಾನಾಗಿ ವಿಕಾಸಗೊಂಡ ಘಟಕವಲ್ಲ. ನಮ್ಮ ಸಂಸ್ಕೃತಿಯ ರಾಜಕೀಯವನ್ನು ಪರಿಶೀಲಿಸುವ ಆಸಕ್ತಿ ಇರುವವರೆಲ್ಲರೂ 'ಸತಿ' ಆಚರಣೆ ವಿಷಯದಲ್ಲೂ ಇದು ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ಮನನ ಮಾಡಿಕೊಳ್ಳಬೇಕಾಗುತ್ತದೆ.

ಈ ಇಡೀ ಪ್ರಕ್ರಿಯೆಯಲ್ಲಿ ನಿಜವಾಗಿ ಕಳೆದು ಹೋಗಿರುವುದು ಮಹಿಳೆಯ ಸ್ವತ್ವ. ಅವಳನ್ನು ಅಪಾರ್ಥಿವ ಜೀವಿಯನ್ನಾಗಿ ಪರಿವರ್ತಿಸಲು ಅವಳ ಸ್ವಂತ ಶರೀರವನ್ನು ಉನ್ಮೂಲನಗೊಳಿಸಲಾಗಿದೆ. ಅವಳ ಸುತ್ತಲೂ ಇರುವ ಸಂಸ್ಕೃತಿಯು ಮಹಿಳೆಯ ಲೋಕಾತೀತ ಚೈತನ್ಯರೂಪದ ಗಳಿಗೆಯೆಂದು ಅದನ್ನು ವೈಭವೀಕರಿಸಿ ಆರಾಧಿಸುತ್ತಿರುವಾಗ ಈ ಸ್ವತ್ವದ ನಿರಾಕರಣದ ಪ್ರಕ್ರಿಯೆಯಲ್ಲಿ ಸ್ವತಃ ಆ ಮಹಿಳೆಯೇ ಪಾಲ್ಗೊಳ್ಳುತ್ತಿರುತ್ತಾಳೆ ಎನ್ನುವುದು ಒಂದು ವ್ಯಂಗ್ಯವೇ ಸರಿ.

ನಾನು ಉಲ್ಲೇಖಿಸುವ ಮತ್ತೊಂದು ಪಠ್ಯ ಮಹಾಶ್ವೇತಾದೇವಿಯವರ 'ಸ್ತನದಾಯಿನಿ'. ಈ ಪಠ್ಯವು ಯಶೋದ ಎಂಬ ಮಹಿಳೆಯನ್ನು, ಅವಳ ಶರೀರವನ್ನೂ ರೂಪಿಸಿರುವ ಸಂಸ್ಕೃತಿಗಳ ಸಂಬಂಧದಲ್ಲಿ ಇರಿಸುತ್ತದೆ. ದೇಹವನ್ನು ಚೈತನ್ಯದಿಂದ ಬೇರ್ಪಡಿಸಿರುವಂಥ ಸಂಸ್ಕೃತಿಯೊಂದು 'ದೇವಿ'ಯನ್ನು ಚಿತ್ರಿಸಿದರೆ ಸ್ತನದಾಯಿನಿಯು ದೇಹ-ಚೇತನಗಳೆರಡೂ ಒಂದಾಗಿರುವ ಸ್ಥಿತಿಯನ್ನು ಚಿತ್ರಿಸುತ್ತದೆಯಾದರೂ ಇಲ್ಲಿನ ವಿಷಾದನೀಯ ವಿರೋಧಾಭಾಸ ಎಂದರೆ ನಿರ್ಲೈಂಗಿಕಕರಣವು ಹೇಗೋ ಹಾಗೆಯೇ ದೇಹರಚನೆ ಕೂಡ ಮಹಿಳೆಯರ ವಿರುದ್ಧವಾಗಿ ಕೆಲಸ ಮಾಡುತ್ತದೆ. ಪರಸ್ಪರ ವಿರುದ್ಧವಾಗಿರುವಂತಹ ಎರಡು ಯೋಜನೆಗಳೂ ಹೆಣ್ಣಿನ ಚೈತನ್ಯವನ್ನು ಮಾತ್ರ ವೈಭವೀಕರಿಸುತ್ತವೆ ಎಂಬುದೇ ಇಲ್ಲಿನ ವ್ಯಂಗ್ಯ. ಸಾರ್ವತ್ರಿಕವಾದ ತಾಯ್ತನದ ಪರಿಗ್ರಹಿಕೆಯನ್ನು ಸವಲತ್ತಿಗೇರಿಸುವ ಮೂಲಕ "ಸ್ತನದಾಯಿನಿ"ಯಲ್ಲಿರುವ ಸಾಂಸ್ಕೃತಿಕ ನಾಮಕ್ರಿಯಾರೂಪವು ಸೂಕ್ಷ್ಮವಾಗಿ ಕೆಲಸ ಮಾಡುತ್ತದೆ. ಭಗವಂತನಿಗೇ ತಾಯಿಯಾದ ಯಶೋದೆಯ ಮೂಲ ಮಾದರಿಯು ವಿಶ್ವಾತ್ಮಕ ತಾಯ್ತನದ, ಜಗನ್ಮಾತೆಯ ಪ್ರತೀಕವೂ ಆಗಿದೆ. ಅದು ಆ ಸಂಸ್ಕೃತಿಯಲ್ಲಿ ಹುಟ್ಟಿದ ಮಹಿಳೆಯರ ಬದುಕುಗಳ ಮೇಲೆ ಪರಿಣಾಮ ಬೀರುವಷ್ಟು ಬಲಿಷ್ಠವಾದದ್ದೂ ಆಗಿದೆ. ಆದರೆ ಯಶೋದೆಯ ವಿಷಯದಲ್ಲಿ ಅದು ಅಸ್ತಿತ್ವಕ್ಕೆ ಸಂಬಂಧಿಸಿದ ವಿಧಿಯೊಂದಿಗೆ ತಳುಕು ಹಾಕಿಕೊಂಡಿರುತ್ತದೆ. ಹೀಗೆ ಭಾವನಾತ್ಮಕ / ಆಧ್ಯಾತ್ಮಿಕ ಸ್ತರದಲ್ಲಿ ಕೆಲಸ ಮಾಡುವಂಥ ಮೂಲ ಮಾದರಿಯ ವಿನ್ಯಾಸವು ಬದುಕಿನ ಸನ್ನಿವೇಶಗಳಿಂದ ಬಲಗೊಳಿಸಲ್ಪಡುತ್ತದೆ.



ಇಲ್ಲಿ ಕುತೂಹಲಕರವಾದ ಸಂಗತಿ ಎಂದರೆ ಸಾಂಸ್ಕೃತಿಕ ಮೂಲೋದ್ದೇಶಗಳ ಮತ್ತು ಆರ್ಥಿಕ ಅವಶ್ಯಕತೆಗಳ ಒಳಮುಖವು ಮಹಿಳೆಯ ಪ್ರಜ್ಞೆಯ ಮೇಲೆ ಚೈತನ್ಯಾತ್ಮಕತೆಯನ್ನು ಮೇಲಿನಿಂದ ಹೇರಿರುವುದು. ಯಶೋದೆಯ ಅಸಹಾಯಕತೆಯು ವಿಧಿಗಳಿಂದ ಬಲಗೊಳ್ಳುತ್ತದೆ. ಅವಳು ತನ್ನ ದೇಹವನ್ನು ಉತ್ಪಾದನೆಯ ಸಾಧನವನ್ನಾಗಿ ಬಳಸಬೇಕಾಗಿರುವುದು, ನಿರಂತರವಾಗಿ ತಾಯಿಯಾಗುತ್ತಲೇ ಉಳಿಯಬೇಕಾಗಿರುವುದು, ಒಂದು ಶ್ರೀಮಂತ ಕುಟುಂಬಕ್ಕೆ ಮೊಲೆ-ದಾದಿಯಾಗಿ ಕೆಲಸ ಮಾಡಬೇಕಾಗಿರುವುದು ಮತ್ತು ಆ ಮೂಲಕ ತನ್ನದೇ ಕುಟುಂಬದ ಉಳಿವನ್ನು ಖಚಿತ ಪಡಿಸಿಕೊಳ್ಳಬೇಕಾಗಿರುವುದು ಅವಳ ಅಸಹಾಯಕತೆಯ ವಿಧಿಗಳಾಗಿದ್ದು, ಸಾಂಸ್ಕೃತಿಕ, ಆರ್ಥಿಕ ಹಾಗೂ ಸಾಮಾಜಿಕ ಅಂಶಗಳು ಇಂಥ ಮಹಿಳೆಯ ಅಸಹಾಯಕ ವಿಧಿಗಳಿಂದ ಪುಷ್ಟಿಗೊಳ್ಳುವುದನ್ನು ಈ ಕಥೆಯು ಪ್ರಶ್ನಿಸುತ್ತದೆಂಬುದು ಸ್ಪಷ್ಟವಾಗಿದೆ.

ಕೊನೆಯವರೆಗೂ ಯಶೋದ ತನ್ನ ಶರೀರವನ್ನು ವೈಭವೀಕರಿಸುತ್ತಿರುತ್ತಾಳೆ. ಅದು ಜೀವನೋಪಾಯದ ಸಾಧನ ಎಂದಷ್ಟೇ ಅಲ್ಲ; ತುಂಬ ಮುಖ್ಯವಾಗಿ "ಚೈತನ್ಯೀಕರಣ" ಗೊಳ್ಳುವಂಥಾದ್ದು, ಅದು ಜೀವನಕ್ಕೆ ಅವಶ್ಯಕ ಚೈತನ್ಯವನ್ನು ಒದಗಿಸುವ, ಪೋಷಿಸುವ, ರಕ್ಷಿಸುವ ಸಾಧನ. ತಾನು ಮರಣಾಂತಿಕ ಗಳಿಗೆಯಲ್ಲಿ ಮಾತ್ರವಲ್ಲ, ವಾಸಿಯಾಗದ ವ್ಯಾಧಿಯಿಂದ ಹಾಸಿಗೆ ಹಿಡಿಯಬೇಕಾಗಿ ಬಂದು, ದೇಹದ ಅಸಹನೀಯ ವೇದನೆಯ ಯಾತನೆಯು ಅವಳಲ್ಲಿ ತಾನು ಬದುಕಿನುದ್ದಕ್ಕೂ ದೇಹ ಮತ್ತು ಚೈತನ್ಯಗಳೆರಡರಲ್ಲೂ ಶೋಷಿತಳಾಗಿದ್ದೇನೆಂಬ ಆಘಾತಕರ ಅರಿವನ್ನು ಹುಟ್ಟಿಸುತ್ತದೆ. ಎಲ್ಲರಿಂದ ಪರಿತ್ಯಕ್ತಳಾದ ಯಶೋದೆಗೆ ಈ ಅರಿವು ಅವಳನ್ನು ಹಿಂಡುವ ರೋಗಕ್ಕಿಂತಲೂ ಹೆಚ್ಚು ಕೇಡಿನದಾಗಿದೆ. ತಾನು ಮೊಲೆಯುಣಿಸುವವಳಾಗಿ ನಂಬಿದ್ದ ಎಲ್ಲದರ ಹಿಂದಿದ್ದ ವಂಚನೆ, ಕುಟಿಲತೆ ಹಾಗೂ ಇಂಥ ನಂಬಿಕೆಯನ್ನು ಹುಟ್ಟಿಸಿದ ಸಂಸ್ಕೃತಿಯ ಠಕ್ಕುಗಾರಿಕೆಗಳೆಲ್ಲ ಅವಳಿಗೆ ಅರಿವಾಗುತ್ತವೆ. ಯಶೋದೆಗೆ ಅವಳ ಆಧ್ಯಾತ್ಮಿಕ ಚೈತನ್ಯದ ಸ್ಪಷ್ಟವಾದ ನೆಲೆಯು ಅರ್ಥವಾಗುವುದೂ ಆಗಲೇ. "ದೇವಿ" ಮತ್ತು "ಸ್ತನದಾಯಿನಿ" ಪಠ್ಯಗಳು 'ಆಧ್ಯಾತ್ಮಿಕತೆ' ಎಂಬ ಶಬ್ದದ ಅರ್ಥವನ್ನು, ಮೌಲ್ಯವನ್ನು, ಮತ್ತು ಅನುಭವವನ್ನೂ ಉತ್ಪಾದಿಸುವಂಥ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಪರಿಮಾಣಗಳನ್ನು ಸ್ಪಷ್ಟವಾಗಿ ನಿರ್ವಚಿಸುವ ಮೂಲಕ ಆ ಶಬ್ದವನ್ನು ಸಂದರ್ಭೀಕರಿಸುತ್ತವೆ ಹಾಗೂ ಅವುಗಳ ಪಕ್ಕದಲ್ಲಿ ಮಹಿಳೆಯರನ್ನು ಇಡುವ ಮೂಲಕ ಆ ಶಬ್ದದ ಸ್ಥಾನನಿರ್ದೇಶನದಲ್ಲಿರುವ ರಾಜಕೀಯವನ್ನು ಅರ್ಥಮಾಡಿಕೊಳ್ಳಲು ನಮ್ಮನ್ನು ಒತ್ತಾಯಿಸುತ್ತವೆ. ಮಹಿಳೆಯನ್ನು ಮತ್ತು ಸದಾ ಅಂಚಿಗೆ ಒತ್ತರಿಸಲ್ಪಟ್ಟಿರುವ ಅವಳ ಅನುಭವಗಳನ್ನು ಹೀಗೆ ಅವು ಮುಂಚೂಣಿಗೆ ತರುತ್ತವೆ. ಈ ರೀತಿಯಲ್ಲಿ ಮಹಿಳೆಯನ್ನು ಮುಂದಿಡುವ ಕ್ರಿಯೆಯೇ ಸ್ವತಃ ಪಿತೃಪ್ರಧಾನ ಸಮಾಜವು ನಾಶಪಡಿಸಿದ್ದ ಅವಳ ಚಾರಿತ್ರಿಕ ಸ್ವತ್ವದ ಪ್ರಾಮುಖ್ಯವನ್ನು ಗುರುತಿಸುವಿಕೆಯೂ ಆಗುತ್ತದೆ.

–2–

**ಪ್ರತಿರೋಧದ ಗಡಿರೇಖೆಗಳ ರೂಪನಕ್ಷೆ; ಆಧ್ಯಾತ್ಮಿಕ ರಾಜಕೀಯ ಆಯಾಮಗಳು ಮತ್ತು ಅದರ ಸೌಂದರ್ಯ ಮೀಮಾಂಸಾತ್ಮಕ ಪಡಿರೂಪ:**

ನನ್ನ ಪ್ರಬಂಧದ ಈ ಭಾಗದಲ್ಲಿ ಆಧ್ಯಾತ್ಮಿಕ ಘಟಕದ ಸಕ್ರಿಯ ರಾಜಕೀಯ ಸ್ಥಾನ ನಿರ್ದೇಶನದ ಕಡೆಗೆ ಹೊರಳುತ್ತೇನೆ. 'ಆಧ್ಯಾತ್ಮಿಕತೆ'ಯ ಪರವಾದ ಬಲವಾದ ವಾದ-ವಿವಾದಗಳು ತಳವೂರಬಹುದಾದ ಒಂದು ಕಟ್ಟಡವನ್ನು ನಿರ್ಮಿಸುವ ಭಾಗ ಇದಾಗಿದೆ. 'ಆಧ್ಯಾತ್ಮಿಕ'ಕ್ಕೆ ಸಾವಯವ ಸಂಬಂಧವನ್ನು ಹೊಂದಿರುವ ಮತ್ತೊಂದು ಆಯಾಮವನ್ನು ನಾನು ಇಲ್ಲಿ ವಾದದಲ್ಲಿ ತರುತ್ತಿರುವುದನ್ನು ಬಹುಶಃ ಸ್ಪಷ್ಟಪಡಿಸುವುದು ಅವಶ್ಯಕ. ಅಂದರೆ, ನನ್ನ ದೃಷ್ಟಿಯಲ್ಲಿ 'ಆಧ್ಯಾತ್ಮಿಕ' ಎಂಬುದಕ್ಕೆ ಪೂರಕವೂ ಅನುಬಂಧವೂ ಆಗಿರುವ 'ಸೌಂದರ್ಯ ಮೀಮಾಂಸೆ'ಯ ಆಯಾಮವನ್ನು ನಾನು ಇಲ್ಲಿ ಸೇರಿಸುತ್ತಿದ್ದೇನೆ ಎಂದರ್ಥ. ಅವುಗಳ ಅಂತರ್ ಸಂಬಂಧಿತ ಸ್ಥಿತಿಯನ್ನು ಪರಿಶೀಲಿಸಲು ನಾನು ಉದ್ದೇಶಿಸಿದ್ದೇನೆ ಹಾಗೂ ಅವುಗಳ ರಾಜಕೀಯ ಸ್ಥಾನ ನಿರ್ದೇಶನಕ್ಕೆ ಒತ್ತುಕೊಡಲು ಇಚ್ಛಿಸುತ್ತೇನೆ. ಸೌಂದರ್ಯ ಮೀಮಾಂಸಾತ್ಮಕತೆ ಹಾಗೂ ಆಧ್ಯಾತ್ಮಿಕತೆಗಳನ್ನು ತಮ್ಮ ರಾಜಕೀಯದ ಅನುಷ್ಠಾನಗಳಲ್ಲಿ ಪೂರ್ತಿಯಾಗಿ ಭಿನ್ನವಾದಂಥ ಹಾಗೂ ಸಾಂಸ್ಕೃತಿಕ ಮನನದ ಸ್ಥಿತಿಗಳಲ್ಲಿ ಪರಸ್ಪರ ವಿರುದ್ಧವೂ ಆಗಿರುವ ಎರಡು ಗುಂಪುಗಳು ತಿರಸ್ಕರಿಸುತ್ತವೆ ಎಂಬುದು ನನಗೆ ದೊಡ್ಡ ವ್ಯಂಗ್ಯವಾಗಿ ಅನಿಸುತ್ತದೆ.

ಮೊದಲನೆಯ ಭಾಗದಲ್ಲಿ ನಾನು ತೀವ್ರಗಾಮಿ ಸ್ತ್ರೀವಾದಿಗಳು ಮತ್ತು ಅವರು ಅಕ್ಕ ಮತ್ತು ಮೀರಾರಂತಹ ವ್ಯಕ್ತಿಗಳ 'ಆಧ್ಯಾತ್ಮಿಕತೆ'ಯನ್ನು ತಿರಸ್ಕರಿಸುವ ಆಯಾಮವನ್ನೂ ಕುರಿತು ಪ್ರಸ್ತಾಪಿಸಿದ್ದೆ. ಅವರ ವಾದಗಳು ಆಗಲೆ ದಾಖಲಾಗಿರುವುದರಿಂದ ಅವುಗಳ ಸಪ್ರಮಾಣತೆಯನ್ನು ಪರಿಶೀಲಿಸುವತ್ತ ಮುಂದುವರೆಯುತ್ತೇನೆ.

ಅಕ್ಕನು ಚೆನ್ನಮಲ್ಲಿಕಾರ್ಜುನ ದೇವನನ್ನು ಉಲ್ಲೇಖಿಸುವುದು ಸ್ಪಷ್ಟವಾದ ಚಾರಿತ್ರಿಕ / ಸಾಮಾಜಿಕ ಜಾಗದಿಂದ ಹೊರಡುವಂಥಾದ್ದಲ್ಲ, ಬದಲಾಗಿ ಅಂಥ ಚಾರಿತ್ರಿಕ ಸಂದರ್ಭವನ್ನೇ ನಿರಾಕರಿಸುವ ಅವಳ ಕಲ್ಪನೆಯಿಂದ ಹೊರಟದ್ದು ಅದು ಎಂಬುದನ್ನು ತೀವ್ರಗಾಮಿ ಸ್ತ್ರೀವಾದಿ ನಿಲುವು ಸರಿಯಾಗಿ ಅರ್ಥಮಾಡಿಕೊಳ್ಳುವುದಿಲ್ಲ. ಅಕ್ಕನಲ್ಲಿರುವ 'ಕಲ್ಪಕತೆ' ಎಂಬುದು ಒಂದು ಪ್ರಜ್ಞಾಪೂರ್ವಕ ರಚನೆಯಾಗಿದ್ದು 'ವಾಸ್ತವ ರಾಜಕೀಯ'ವನ್ನು ಖಚಿತವಾದ ರಾಜಕೀಯ ಶಬ್ದಗಳ ಮೂಲಕ ಅದು ಬುಡಮೇಲಾಗಿಸುತ್ತದೆ. ಅದು ಚಾರಿತ್ರಿಕ ಅಂಶವೇನೂ ಇಲ್ಲದ, ರಹಸ್ಯಾತ್ಮಕವಾದ ಅಥವಾ ಅಮೂರ್ತವಾದ ನಿಲುವೇನೂ ಅಲ್ಲ – ಅಕ್ಕನು ಸುತ್ತಲಿನ ಪುರುಷರನ್ನು ತೀಕ್ಷ್ಣವಾಗಿ ಖಂಡಿಸುತ್ತಾಳೆ. ಅವರನ್ನು 'ಕಂಟಕ'ಗಳೆಂದು, 'ಅವರೆದೆಯಲ್ಲಿ ಮುಳ್ಳುಗಳನ್ನೇ ಹೊಂದಿದವರೆಂದೂ' ಕಾಣುತ್ತಾಳೆ. ಅವರೊಂದಿಗೆ ಯಾವುದೇ ಸ್ತರದಲ್ಲೂ, ಸಂಬಂಧ ಹೊಂದಲು ಒಲ್ಲದ ಅವಳು 'ಈ ಸಾವ ಕೆಡುವ ಗಂಡರನ್ನೊಯ್ದು ಒಲೆಗಿಕ್ಕಿ' ಎಂದು ಎಲ್ಲ ಮಹಿಳೆಯರಿಗೂ ಬೋಧಿಸುತ್ತಾಳೆ. ಈ ನೆಲೆಯಲ್ಲಿನ ರಾಜಕೀಯವು ಸಾಕಷ್ಟು ಸ್ಪಷ್ಟವಾದದ್ದು. 'ಆಧ್ಯಾತ್ಮಿಕತೆ'ಯನ್ನು ಒಪ್ಪುವವರು ಇಲ್ಲವೆ ತಿರಸ್ಕರಿಸುವವರು ಈ ಅಂಶವನ್ನು ತಮ್ಮ ತಮ್ಮ ಸೈದ್ಧಾಂತಿಕ ಅನುಕೂಲಗಳಿಗಾಗಿ ನಿರ್ಲಕ್ಷಿಸುತ್ತಾರೆ. ಅಕ್ಕನು ತನ್ನ 'ಕಲ್ಪಕತೆ'ಯನ್ನು 'ವಾಸ್ತವ'ದ ಜಗತ್ತಿನಲ್ಲಿ ನೆಲೆಗೊಳಿಸುತ್ತಾಳೆ. ಈ 'ವಾಸ್ತವ' ಜಗತ್ತಿನ ಕೇಂದ್ರದಲ್ಲಿ ಅವಳ ಲೈಂಗಿಕತೆಯಿದೆ, ಹಾಗೂ ಅದು ಚರಿತ್ರೆಯಿಂದ ಹೊರಗಿನದಾದ ಕಲ್ಪನಾತ್ಮಕ ರಚನೆಯೇನೂ ಅಲ್ಲ. ಹೀಗೆ ರಾಜಕೀಯ ಜಗತ್ತಿನ ಹೃದಯದಲ್ಲೇ 'ಆಧ್ಯಾತ್ಮಿಕತೆ'ಯ ಸ್ಥಾನ ನಿರ್ದೇಶಿಸುವುದು ಅವಶ್ಯಕವಾಗುತ್ತದೆ. ಮತ್ತು ಅದನ್ನು ವ್ಯಕ್ತಿಗಳ ಬರೀ ಕಲ್ಪನಾತ್ಮಕ ಅಥವಾ ಅನುಭಾವಿಕ ಜಾಗಗಳಿಗೆ ಮಾತ್ರ ಸೀಮಿತಗೊಳಿಸುವುದು ಸಮಂಜಸವಲ್ಲ. ತೀವ್ರಗಾಮಿ ಸ್ತ್ರೀವಾದಿಗಳ ಎಲ್ಲವನ್ನೂ ಸಂಕುಚಿತಗೊಳಿಸುವ ರಾಜಕೀಯ ಪ್ರಜ್ಞೆಯು ಇದನ್ನು ಸಮರ್ಪಕವಾಗಿ ಗ್ರಹಿಸಲಾರದು.

ರಾಜಕೀಯವಾಗಿ ಪ್ರಜ್ಞಾವಂತರಾದ ತೀವ್ರಗಾಮಿ ಸ್ತ್ರೀವಾದಿಗಳು ಅಕ್ಕನನ್ನೂ ಆಕೆಯ ರಾಜಕೀಯ ನೆಲೆಯನ್ನೂ ತಮ್ಮದೇ ಆದ ರೀತಿಯಿಂದ ನಿರಚನೆ ಮಾಡಿದರೆ ಸಾಂಸ್ಕೃತಿಕ ಸಂಪ್ರದಾಯ ವಾದಿಗಳು ಈ ವರ್ಣಪಟಲದ ಮತ್ತೊಂದು ತುದಿಯಲ್ಲಿ ತಮ್ಮನ್ನು ಇಟ್ಟುಕೊಂಡು ತಮ್ಮದೇ ಆದ ಸಾಂಸ್ಕೃತಿಕ ಹಾಗೂ ರಾಜಕೀಯ ಸಂಕುಚಿತವಾದವನ್ನು ಮುಂದಿಡುತ್ತಾರೆ. ತೀವ್ರಗಾಮಿ ಸ್ತ್ರೀವಾದಿಗಳೂ, ಸಂಪ್ರದಾಯವಾದಿಗಳೂ ಬೇರೆ ಬೇರೆ ದಾರಿಗಳಿಂದ ಬೇರೆ ಬೇರೆ ಮಹಿಳೆಯರ ಬಲಿಷ್ಠವಾದ

'ಆಧ್ಯಾತ್ಮಿಕ' ಮತ್ತು 'ಸೌಂದರ್ಯೋಪಾಸಾತ್ಮಕ' ಕ್ಷೇತ್ರಗಳನ್ನು ಅ-ರಾಜಕೀಯಗೊಳಿಸುವಲ್ಲಿ, ಅ-ಚಾರಿತ್ರಿಕವಾಗಿಸುವಲ್ಲಿ ಒಂದಾಗು ತ್ತಾರೆಂಬುದು ವಿರೋಧಾಭಾಸವೇ ಸರಿ.

ನಿದರ್ಶನಕ್ಕಾಗಿ ಹೇಳುತ್ತೇನೆ: ನೃತ್ಯದ ಜಗತ್ತಿನಲ್ಲಿ 'ಶೃಂಗಾರ' ಎಂಬುದು ಒಂದು ರಸವಾಗಿದ್ದು, ಮಹಾನರ್ತಕಿ ಬಾಲಸರಸ್ವತಿ ಯಂಥವರನ್ನು ಒಳಗೊಂಡಿರುವ ನೃತ್ಯಕಲೆಯ ಪರಂಪರೆಯಿಂದ ಈ ಶೃಂಗಾರದಲ್ಲಿ ಕಾಮದ ಅಂಶಗಳೇ ಪ್ರಾಮುಖ್ಯಕ್ಕೆ ಬಂದವು. ಸೌಂದರ್ಯ ಮೀಮಾಂಸಕರು ಅಧ್ಯಯನ ಮಾಡಬೇಕಾದ ಕೇವಲ 'ಸೌಂದರ್ಯ' ಸಂಬಂಧಿತ ಘಟಕವಲ್ಲ ಈ "ಶೃಂಗಾರ". ಬದಲಾಗಿ, ಅದು "ನಾಯಕಿ"ಗೆ "ನಾಯಕ"ನನ್ನು ಅಥವಾ ತನ್ನ ಪ್ರಿಯತಮನನ್ನು ತನ್ನ ಸಮಾನನೆಂದು ನೋಡಲು ಸಾಧ್ಯವಾಗಿಸುವ ಒಂದು ಸಕ್ರಿಯವಾದ ರಾಜಕೀಯ ಘಟಕದ ಅಂಶವಾಗಿದೆ. ತನ್ನ "ಶೃಂಗಾರಾತ್ಮಕ" ಹಾವಭಾವಗಳಿಂದ "ನಾಯಕಿ"ಯು "ನಾಯಕ"ನನ್ನು ಒಬ್ಬ ಗೆಳೆಯನಂತೆ ಸನ್ನೆ ಮಾಡಿ ಕರೆಯುತ್ತಾಳೆ. ಶ್ರೇಣೀಕೃತವಾದ ರಾಜಕೀಯ / ಸಾಮಾಜಿಕ ವ್ಯವಸ್ಥೆಯು ಈ ರೀತಿಯಲ್ಲಿ ಒಂದು ನಿರ್ದಿಷ್ಟವಾದ "ಸೌಂದರ್ಯೋಪಾಸಕ' ನಿಲುವಿನಿಂದ ತಟಸ್ಥಗೊಳಿಸಲ್ಪಡುತ್ತದೆ. ಈ ಸೌಂದರ್ಯೋಪಾಸಕತೆ ತನ್ನ ವಿಶಾಲಾರ್ಥದಲ್ಲಿ ಮಹಿಳೆಯ ಮನಸ್ಸಿನ ಆವೇಗಕ್ಕೆ ಒಂದು "ಪವಿತ್ರಜಾಗ"ವನ್ನು ಸೃಷ್ಟಿಸಿಕೊಡುತ್ತದೆ ಎಂಬ ನಿಟ್ಟಿನಿಂದ 'ಆಧ್ಯಾತ್ಮಿಕ'ವೂ ಆಗುತ್ತದೆ. ಮಹಿಳೆಗಾಗಿ, ಮಹಿಳೆಯಿಂದ ಸೃಷ್ಟಿಗೊಂಡ ಈ "ಪವಿತ್ರಜಾಗ"ವು ಪಿತೃಪ್ರಾಧಾನ್ಯದ ಕ್ರಮವನ್ನು ಬೆಂಬಲಿಸಲಿಲ್ಲ; ಆ ಮಟ್ಟಿಗೆ ಅದು ಒಂದು ರಾಜಕೀಯ ನಿಲುವೂ ಹೌದು. ಇದು ಸೌಂದರ್ಯಮೀಮಾಂಸಕ ಆಯಾಮದ ಸ್ವಾಯತ್ತತೆಯಾಗಿದ್ದು ತನ್ನಿಂದ ತಾನೇ ರೂಪುಗೊಂಡ ರಾಜಕೀಯ ತಳಹದಿಯಾಗಿದೆ.

ಸಂಪ್ರದಾಯವಾದಿಗಳು ಬಹುಮಟ್ಟಿಗೆ ಮೇಲ್ಜಾತಿಯವರು, "ಶೃಂಗಾರ"ವನ್ನು ಅಶ್ಲೀಲ ಹಾಗೂ ಐಹಿಕ ಎಂದು ತಿರಸ್ಕರಿಸಿ, "ನಾಯಕ" – "ನಾಯಕಿ"ಯರ ಮಧ್ಯೆ ಒಂದು ಶ್ರೇಣಿಯನ್ನು ಭಕ್ತಿಯು ಸೃಷ್ಟಿಸಿತೆನ್ನುವುದರ ಅರಿವಿಲ್ಲದೆಯೇ, ಶೃಂಗಾರದ ಜಾಗದಲ್ಲಿ "ಭಕ್ತಿ"ಯನ್ನು ತಂದು ಕೂರಿಸಿದರು. ಹೀಗೆ ಶ್ರೇಣೀಕರಣದ ತತ್ತ್ವವು ಸಮರ್ಥನೆ ಪಡೆದು ಸಂಕುಚಿತ ಮನೋಧರ್ಮದ ಸಂಪ್ರದಾಯವಾದಿಗಳು ಅದರೊಳಗೆ ಪಿತೃಪ್ರಾಧಾನ್ಯದ ಗೃಹೀತಗಳನ್ನು, ಮೌಲ್ಯಗಳನ್ನು ತರುವುದರಲ್ಲಿ ಯಶಸ್ವಿಯಾದರು. ಅವರು ಕಟ್ಟಿದ 'ಆಧ್ಯಾತ್ಮಿಕತೆ' ಎಂಬುದು 'ನಾಯಕಿ'ಯನ್ನು 'ನಾಯಕ'ನಿಗೆ ಅಧೀನವಾಗಿಸುವ, ಹೆಣ್ಣು ಗಂಡಿಗೆ ತನ್ನನ್ನು ಪೂರ್ತಿಯಾಗಿ ಸಮರ್ಪಿಸಿಕೊಳ್ಳುವುದನ್ನು, ಆತ್ಮತ್ಯಾಗವನ್ನು ವೈಭವೀಕರಿಸಿದಂಥ ಪರಂಪರೆಯುಳ್ಳದ್ದಾಯಿತು. ಆದರೆ ಅಕ್ಕನ 'ಲೈಂಗಿಕತೆ' ಮತ್ತು ಬಾಲಸರಸ್ವತಿಯ 'ಶೃಂಗಾರ'ದ ನಿಲುವುಗಳು ಹೆಣ್ಣಿನ ದೇಹವನ್ನು ಪ್ರಧಾನವಾಗಿಸಿಕೊಂಡು 'ಆಧ್ಯಾತ್ಮಿಕತೆ'ಯ ಪ್ರಶ್ನೆಯನ್ನು ಸಂಬೋಧಿಸುತ್ತವೆ. ಮತ್ತೊಂದು ವಿಸ್ತೃತ ಪ್ರಬಂಧದಲ್ಲಿ ನಾನು ಎಲ್ಲಾ ಸ್ತ್ರೀವಾದಿ ಚರ್ಚೆಗಳಲ್ಲೂ ಏಕೆ ದೇಹ ರಚನೆಯ ಅಂಶ ತುಂಬ ಮುಖ್ಯವಾಗುತ್ತದೆ ಎಂಬುದನ್ನು ಅದರ ವಿಶಾಲವಾದ ರಾಜಕೀಯ / ತತ್ತ್ವಶಾಸ್ತ್ರೀಯ ಸೂಚ್ಯಾರ್ಥಗಳೊಂದಿಗೆ ವಿವರಿಸಲು ನಾನು ಯತ್ನಿಸಿದ್ದೇನೆ. 'ದೇಹ'ವು ಮುನ್ನೆಲೆಗೊಂಡಿದ್ದರ ಅರ್ಥಸಾಧ್ಯತೆ ಗಳನ್ನು ಚರ್ಚಿಸುವಾಗ, ನಾನು ಪುರುಷ ಮತ್ತು ಸ್ತ್ರೀ ಎಂಬ ವಿರೋಧಿ ದ್ವಿತ್ವದ ನಿಲುವುಗಳು ತತ್ತ್ವಶಾಸ್ತ್ರೀಯವಾಗಿ ಪ್ರಶ್ನಾರ್ಹವಾಗಿದ್ದು ಸೈದ್ಧಾಂತಿಕವಾಗಿ ದುರ್ಬಲವೂ, ರಾಜಕೀಯವಾಗಿ ಲಾಭಕರವಲ್ಲದ್ದೂ ಆಗಿವೆ ಎಂಬುದನ್ನು ವಾದಿಸಲು ಯೋಜಿಸಿದ್ದೇನೆ.



ಅಕ್ಕ ಮಹಾದೇವಿ



ಬಾಲಸರಸ್ವತಿ

–3–

**ಚೈತನ್ಯ / ಚೈತನ್ಯವಾದ ಹಾಗೂ 'ದೇಹ'ದ ಬಗೆಗಿನ ಮುನ್ನೊಲವು : ಸ್ತ್ರೀ–ಪುರುಷದ ವಿರೋಧಿ ದ್ವಿತ್ವದ ನಿವಾರಣೆ :**

'ಆಧ್ಯಾತ್ಮಿಕ'ವನ್ನು ರೂಪಿಸುವುದರಲ್ಲಿ 'ದೇಹ'ವೇ ಬಹು ಪ್ರಾಮುಖ್ಯದ್ದಾಗಿ ಕಂಡುಬರುತ್ತದೆ ಎನ್ನುವುದು ಆಶ್ಚರ್ಯದ ವಿಷಯವೇನೂ ಅಲ್ಲ, ಆಧ್ಯಾತ್ಮಿಕತೆ, ಅದರ ಎಲ್ಲಾ ಪ್ರಕಟಿತ ವೈವಿಧ್ಯದ ರೂಪಗಳಲ್ಲಿ ಆತ್ಮದ ಭೌತಿಕತೆಯ ಅಂಶವನ್ನು ನಿರ್ಲಕ್ಷಿಸುವುದು ಸಾಧ್ಯವಿಲ್ಲ. ಆಧ್ಯಾತ್ಮಿಕ ಚೈತನ್ಯವನ್ನು ಹುಡುಕಾಡುವ ಎಲ್ಲರಲ್ಲೂ ಭೌತಿಕವಾದ ಸ್ವತ್ವದ ಪ್ರಜ್ಞೆಯು ಇದ್ದೇ ಇರುತ್ತದೆ. ಆದ್ದರಿಂದ ಆಧ್ಯಾತ್ಮಿಕತೆಯನ್ನು ಅರ್ಥಮಾಡಿಕೊಳ್ಳುವ ಪ್ರಯತ್ನಗಳನ್ನು ಶರೀರ ಸಂಯೋಜನೆಗೆ ಸಂಬಂಧಪಡದಂತೆ ನಡೆಸುವುದು ಅಸಾಧ್ಯ ಎನ್ನುವುದು ನಾನು ಮುಂದಿಡಬಯಸುವ ವಾದವಾಗಿದೆ. ಶರೀರವನ್ನು ಪರಿಗಣಿಸದೆ ಅದನ್ನು ಹುಡುಕುವ ಎಲ್ಲ ಪ್ರಯತ್ನಗಳೂ ವ್ಯರ್ಥವೇ ಎಂಬ ದೃಷ್ಟಿಯಿಂದ ಪರಿಶುದ್ಧ ಚೈತನ್ಯರೂಪಿ ಎಂಬ ಗ್ರಹಿಕೆಯು ಅಸಂಗತವಾದದ್ದು. ಆಧ್ಯಾತ್ಮಿಕ ಸ್ವತ್ವ ಎಂಬುದನ್ನು 'ಶರೀರ'ವನ್ನು ನಿರ್ಲಕ್ಷಿಸುವ ಮೂಲಕ ಗಳಿಸಿಕೊಳ್ಳು ವುದು ಅಸಾಧ್ಯವೆಂಬ ಅರಿವು ಹೀಗೆ 'ಲೈಂಗಿಕತೆ'ಯ ಅಂಶಕ್ಕೆ ಅಥವಾ ಕಾಮತತ್ತ್ವಕ್ಕೆ ಹುಟ್ಟನ್ನು ನೀಡುತ್ತದೆ. ಅಕ್ಕನ ಮೌಲ್ಯಗಳು ಮತ್ತು ನಾನು ಸೂಚಿಸಿದ ಭರತನಾಟ್ಯದ ಒಂದು ನಿರ್ದಿಷ್ಟ ಪರಂಪರೆಯು ಈ ಸಂಗತಿ ಯನ್ನು ನಿಸ್ಸಂದೇಹವಾಗಿ ಸ್ಥಾಪಿಸಬಲ್ಲವು. ಲೈಂಗಿಕತೆಯು ಆಧ್ಯಾತ್ಮಿಕ ಜೀವದ ಮೂಲಸತ್ವವಾದ ಅಂಗವಾಗಿದ್ದು ಅದನ್ನು ಉನ್ಮೂಲನ ಗೊಳಿಸುವ ಯತ್ನಗಳು ನಿಜವಾಗಿ ಫಲದಾಯಕವಲ್ಲ. ಅಷ್ಟೇ ಅಲ್ಲ; ಅವು ಅನೈಸರ್ಗಿಕವೂ ಆಷಾಢಭೂತಿತನದ್ದೂ ಆಗಿಬಿಡುತ್ತವೆ. ಒಬ್ಬ ವ್ಯಕ್ತಿ ತನ್ನಲ್ಲಿನ ಲೈಂಗಿಕತೆಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ ಮೂಲಕವೇ ಆಧ್ಯಾತ್ಮಿಕ ಆತ್ಮವನ್ನು ರೂಪಿಸಲು ಸಾಧ್ಯ. ವಾಸ್ತವವಾಗಿ ಅಕ್ಕ ಅನೇಕ ವೇಳೆ ಹಿಂಸಾತ್ಮಕವಾಗಿ ಉದ್ರೇಕಗೊಳ್ಳುವ ಕಾಮದಿಂದ ತನ್ನ ಲೈಂಗಿಕತೆಯನ್ನು ಭಿನ್ನವಾಗಿಸಲು ಯತ್ನಿಸುತ್ತಾಳೆ. ಲೈಂಗಿಕ ಸ್ವತ್ವ ಅಥವಾ ಶರೀರ ಹಾಗೂ ಚೈತನ್ಯಗಳನ್ನು ಬೇರೆ ಮಾಡುವುದು ಒಂದು

ಕೃತಕ ರಚನೆಯಾಗಿದ್ದು ಅದು ಅವೆರಡಕ್ಕೂ ನ್ಯಾಯವನ್ನು ಒದಗಿಸಲಾರದು.

ಇನ್ನೂ ಹೆಚ್ಚು ಸ್ಪಷ್ಟವಾದ ಸಂಗತಿಯೆಂದರೆ ದೇಹದ ಬಗ್ಗೆ ಹೆಚ್ಚು ವಿಚಾರ ಮಾಡುವುದು ಅನಿವಾರ್ಯವಾಗಿ ಪುರುಷ ಸಂಬಂಧಿತ ಚಿಂತನೆಗೇ ಹಾದಿ ಮಾಡಿಕೊಡುತ್ತದೆ. ನಾನು ಹೇಳಬಯಸುವುದೇನೆಂದರೆ ಆಧ್ಯಾತ್ಮಿಕ ಸ್ವತ್ವವನ್ನು ಕುರಿತ ಆಳವಾದ ಹುಡುಕಾಟವು ದೇಹ ಸಂಬಂಧಿಯಾದ ಚಿಂತನೆಗಳಿಗೂ, ಅಲ್ಲಿಂದ ಮುಂದೆ ಪುರುಷನ ಪ್ರತಿಮೆಯೊಂದರ ರೂಪಣಕ್ಕೂ ದಾರಿ ಮಾಡಿಕೊಡುತ್ತದೆ. ಅಕ್ಕನಿಗೆ ಆತ ಚೆನ್ನಮಲ್ಲಿಕಾರ್ಜುನನಾಗುತ್ತಾನೆ. ಈ ಪುರುಷನ ಪ್ರತೀಕವು ಹೆಣ್ಣಿನಿಂದ ಹೆಣ್ಣಿಗೆ ಭಿನ್ನವಾಗುತ್ತದೆ. ಆದರೆ ಎಲ್ಲರ ಒಳಗೂ ಒಬ್ಬ ಅಂತಹ ಪುರುಷನನ್ನು ರೂಪಿಸಿಕೊಳ್ಳುವ ಅವಶ್ಯಕತೆ ಸದಾ ಇರುತ್ತದೆ. ನಾನು ವಾದಮಾಡಲು ಬಯಸುವುದೇನೆಂದರೆ ಯಾವೊಬ್ಬ ಹೆಣ್ಣಿಗೂ ಪುರುಷನನ್ನು ಪರಾಮರ್ಶೆಗೆ ತೆಗೆದುಕೊಳ್ಳದೆಯೇ ಆಧ್ಯಾತ್ಮಿಕವಿರಲಿ, ಬೇರೆಯದಿರಲಿ ತನ್ನ ಸ್ವತ್ವವನ್ನು ರಚಿಸಿಕೊಳ್ಳುವುದು ಸಾಧ್ಯವಾಗದು. ಚಾರಿತ್ರಿಕ ಸಂದರ್ಭದಿಂದ ಪೂರ್ಣವಾಗಿ ಮುಕ್ತವಾದಂಥ ಮಹಿಳೆಯ ಅಂತಃಸತ್ವದ ವಿಚಾರವನ್ನು ಪ್ರಚಾರ ಮಾಡಲು ಯತ್ನಿಸುವ ಅಂತಃಸತ್ವವಾದಿ ನಿಲುವಿನ ಪರವಾಗಿ ವಾದ ಮಾಡುವುದು ಅಸಾಧ್ಯವೆಂದೇ ನನ್ನ ದೃಷ್ಟಿಯಾಗಿದೆ. ಇಂತಹ ಅಂತಃಸತ್ವವಾದವು ಅಸಂಗತವಷ್ಟೇ ಅಲ್ಲ; ಅದು ಅ-ಚಾರಿತ್ರಿಕವೂ ಅ-ರಾಜಕೀಯದ್ದೂ ಆಗುತ್ತದೆ. ಚರಿತ್ರೆಯ ಸಂದರ್ಭವನ್ನು ಸುಮ್ಮನೆ ದೂರತಳ್ಳಿಬಿಡಲು ಬರುವುದಿಲ್ಲ. ಆಧ್ಯಾತ್ಮಿಕತೆಯ ಸ್ಥಾನ ನಿರ್ದೇಶನವು ಅವಶ್ಯಕವಾಗಿ ಚಾರಿತ್ರಿಕವೂ ಮತ್ತು ರಾಜಕೀಯವೂ ಆಗಿದೆ.

ಈ ನಿಲುವಿಗೆ ತೆಕ್ಕೆ ಹಾಕಿಕೊಂಡಿರುವ ಅರ್ಥಗಳು ಬಹು ದೂರದ ವರೆಗೆ ಹೋಗಬಲ್ಲವು. ಇಂಥ ಒಂದು ಅರ್ಥಾರೋಪವೆಂದರೆ ಪುರುಷರು ಮತ್ತು ಸ್ತ್ರೀಯರು ಚಾರಿತ್ರಿಕ ಪೂರ್ವಘಟನೆಗಳಿಂದ ರಚಿತವಾಗಿರುವುದರಿಂದ ಅವರ ಬಹುತೇಕ ಅನುಭವಗಳೂ ಮೌಲ್ಯಗಳೂ ಹಂಚಿಕೊಳ್ಳತಕ್ಕವು ಎಂಬುದು. ಈ ರೀತಿಯಾಗಿ ಪದಗಳು/ಮಾತುಗಳು ಉಚ್ಚರಿಸಲ್ಪಡುವ ಮೂಲಕವೇ ಜ್ಞಾನ ಸಂವಹನೆ ಆಗಬೇಕಾಗಿರುವ ಮೌಖಿಕ ಪರಂಪರೆಯಿರಲಿ ಅಥವಾ ಲಿಖಿತ ಶಬ್ದಗಳು ಜ್ಞಾನವನ್ನು ಉತ್ಪಾದಿಸುವಂಥ ಅಕ್ಷರ ಪರಂಪರೆಯೇ ಇರಲಿ, ಪುರುಷರು ಮತ್ತು ಸ್ತ್ರೀಯರು ಇಬ್ಬರನ್ನೂ ಒಟ್ಟಾಗಿಯೇ ಸೂಚಿಸುವಂತಹ, ಮಧ್ಯದ ಒಂದು ಸಾಮಾನ್ಯತ್ವದ ಅಂಶ ಪುರುಷರು ಮತ್ತು ಸ್ತ್ರೀಯರ ಮಧ್ಯೆ ಇರುತ್ತದೆ. (Phonocentricism) ಶಬ್ದೋಚ್ಚಾರಣೆ ಕೇಂದ್ರಿತತೆ ಮತ್ತು (Logocentricism) ತರ್ಕಕೇಂದ್ರಿತತೆಗಳು ಪ್ರತಿಯೊಂದು ಚಾರಿತ್ರಿಕ ಸಂಧಿಕಾಲದಲ್ಲೂ ಪುರುಷರು ಮತ್ತು ಸ್ತ್ರೀಯರು ಇಬ್ಬರ ಮೇಲೂ ಸಮಾನವಾಗಿ ಕೆಲಸಮಾಡುತ್ತಿರುತ್ತವೆ. ಪ್ರಾಚೀನ ಊಳಿಗಮಾನ್ಯ ವ್ಯವಸ್ಥೆಯಲ್ಲಿರಲಿ ಅಥವಾ ಸಾಪೇಕ್ಷವಾಗಿ ಈಚಿನದಾದ ಪಿತೃಪ್ರಾಧಾನ್ಯದಲ್ಲೇ ಇರಲಿ ಇಲ್ಲವೆ ಸಮಕಾಲೀನ ಜಾಗತೀಕರಣಗೊಂಡ ಪ್ರಪಂಚದಲ್ಲೇ ಆಗಿರಲಿ, ಪುರುಷರು ಮತ್ತು ಸ್ತ್ರೀಯರು ತಮ್ಮ ಅನುಭವಗಳನ್ನು, ಮೌಲ್ಯಗಳನ್ನು ಹಾಗೂ ಅರ್ಥಗಳನ್ನು ಒಟ್ಟಾಗಿಯೇ ನಿರ್ಮಿಸಿಕೊಳ್ಳುತ್ತಾರೆ. ಜಗತ್ತಿನ ವ್ಯವಸ್ಥೆಗಳು ಮತ್ತು ಜ್ಞಾನವ್ಯವಸ್ಥೆಗಳು ಅವರಿಬ್ಬರ ಮೇಲೂ ಸಮಾನವಾಗಿಯೇ ಕೆಲಸ ಮಾಡುತ್ತವೆ. ಒಬ್ಬ ಮಹಿಳೆ ಪಿತೃಪ್ರಾಧಾನ್ಯದ ಗ್ರಹಿಕೆಗಳನ್ನು ಅಂತಸ್ಥವಾಗಿಸಿಕೊಂಡರೆ ಮತ್ತು ಅದು ಅವಳ ಮೇಲೆ ಹೇರುವಂಥ ಎಲ್ಲವನ್ನೂ ಒಪ್ಪಿಕೊಂಡರೆ, ಪಿತೃಪ್ರಧಾನ ವ್ಯವಸ್ಥೆಯಿಂದಲೇ ರೂಪುಗೊಂಡಿರುವ ಮತ್ತು ಅದರ ನಿರೀಕ್ಷೆಗಳಿಗೆ ಅನುಗುಣವಾಗಿಯೇ ವರ್ತಿಸುವ ಪುರುಷನಿಗಿಂತ ಅವಳೇನೂ ಭಿನ್ನವಾಗಿರುವುದಿಲ್ಲ. ಇಬ್ಬರೂ ವ್ಯವಸ್ಥೆಯಿಂದ ಬಲಿಪಶುಗಳಾಗಿ ಮಾಡಲ್ಪಟ್ಟಿರುತ್ತಾರೆ. ಇಂತಹ ಒಂದು ವಾದವು ವಾಸ್ತವದಲ್ಲಿ ಮಹಿಳೆಯೇ ಅತ್ಯಂತ ಕೆಡುಕಿಗೆ ಒಳಗಾಗುವವಳು ಎಂಬುದನ್ನು ಯಾವತ್ತೂ ನಿರ್ಲಕ್ಷಿಸುವುದಿಲ್ಲ.

ಇದಕ್ಕೆ ಭಿನ್ನವಾಗಿ ನಾನು ಹೇಳಲು ಯತ್ನಿಸುವುದು ಇದು. ಅನೇಕ ಬಗೆಯ ನೈತಿಕ ಮತ್ತು ಸೈದ್ಧಾಂತಿಕ ಮೌಲ್ಯಗಳನ್ನು ಮತ್ತು ತತ್ತ್ವಗಳನ್ನೂ ಹರಿಯ ಬಿಡುವ ಲೋಕದ ಸಂದರ್ಭದಲ್ಲಿ 'ಆಧ್ಯಾತ್ಮಿಕತೆ' ಯನ್ನು ಅರಸುವ ಪುರುಷರಿಗೂ ಮತ್ತು ಸ್ತ್ರೀಯರಿಗೂ ಹೋರಾಟವು ಒಂದೇ ರೀತಿಯದಾಗಿರುತ್ತದೆ. ತಮ್ಮನ್ನು ಸುತ್ತುವರೆದಿರುವ ವ್ಯವಸ್ಥೆಗಳ ನಿರಂಕುಶಾಧಿಕಾರಗಳ ವಿರುದ್ಧ ಸೆಣಸಾಡಲು ಬಯಸುವ ವ್ಯಕ್ತಿಗಳಿಗೆ ಇರುವ ಅವಶ್ಯ ಕರ್ತವ್ಯವೆಂದರೆ 'ಕಟ್ಟಲಾಗಿರುವ ಚಾರಿತ್ರಿಕ ಸ್ವತ್ವ'ದೊಂದಿಗೆ ನೇರವಾಗಿ ಮುಖಾಮುಖಿಯಾಗುವುದು ಹಾಗೂ ಸದಾ ಇನ್ನೂ ಸಂಭವಿಸುವ ಸ್ಥಿತಿಯಲ್ಲೇ ಇರುವ "ಕಾಲ್ಪನಿಕ" ಸ್ವತ್ವವೊಂದನ್ನು ಆವಿಷ್ಕರಿಸಿಕೊಳ್ಳುವುದು. ಸಂಕ್ಷಿಪ್ತವಾಗಿ ಹೇಳುವುದಾದರೆ, ತೀವ್ರಗಾಮಿಯೂ ಸ್ವಾಯತ್ತವೂ ಆದ ಮತ್ತು ಜಗತ್ತಿನ ಯಾಜಮಾನ್ಯ ವಹಿಸಿರುವ ಶಕ್ತಿಗಳನ್ನು ಎದುರಿಸುತ್ತಲಿರುವ ಈ ಆಧ್ಯಾತ್ಮಿಕ ಸ್ವತ್ವವು ಸದಾ ತಾತ್ಕಾಲಿಕ ಸ್ವತ್ವವೇ ಆಗಿದ್ದು ಅದು ತನಗಾಗಿ ವ್ಯತ್ಯಾಸಗಳನ್ನು ಹುಟ್ಟಿಸುತ್ತದೆ ಮತ್ತು ತನ್ನ ಅರ್ಥಗಳನ್ನು ತಾನೇ ನಿರಾಕರಿಸುತ್ತಿರುತ್ತದೆ. ಪರಿಣಾಮವಾಗಿ "ಆಧ್ಯಾತ್ಮಿಕತೆ" ಕೂಡ ಕೇವಲ ತಾತ್ಕಾಲಿಕವೇ ಆಗಿರುತ್ತದೆ. ಅದೇನೇ ಇರಲಿ, ಈ "ಕಾಲ್ಪನಿಕ" ಸ್ವತ್ವವು ಚರಿತ್ರೆಯಲ್ಲಿ ಬೇರು ಹೊಂದಿರುತ್ತದೆ ಎನ್ನುವುದು ಮಾತ್ರ ಸ್ಥಿರವಾದದ್ದು. ವಾಸ್ತವದಲ್ಲಿ, ಕನಿಷ್ಠಪಕ್ಷ ಭಾರತದ ಸಂದರ್ಭದಲ್ಲಿ, ಪಿತೃಪ್ರಾಧಾನ್ಯದ ಮತ್ತು ಇತರ ಬಗೆಯ ಪುರುಷಪರ ಧೋರಣೆಗಳನ್ನು ಮೀರಲು ಯತ್ನಿಸುವ ಪುರುಷರ ಹೋರಾಟವು ಪುರುಷ ಮತ್ತು ಸ್ತ್ರೀಯರಿಬ್ಬರನ್ನೂ ಒಳಗೊಂಡ ಶರೀರವೊಂದನ್ನು – "ಅರ್ಧನಾರೀಶ್ವರ"ದ ಪರಿಕಲ್ಪನೆಯನ್ನು – ಕಟ್ಟಿಕೊಟ್ಟಿದೆ. ಈ ಪ್ರತಿಮೆಯ ಆಯಾಮಗಳು ಧಾರ್ಮಿಕವಿರಲಿ ಅಥವಾ ಆಧ್ಯಾತ್ಮಿಕವಿರಲಿ, ಅದು ಒಂದು ಸ್ತರದಲ್ಲಿ ಒಂದು ರಾಜಕೀಯ ಸಂಕೇತವಾಗಿದ್ದು, ಪ್ರಧಾನ ಸಾಮಾಜಿಕ-ಸಾಂಸ್ಕೃತಿಕ ಸಂಕೇತಗಳು ಮತ್ತು ಆಚರಣೆಗಳಿಗೆ ಪರ್ಯಾಯಗಳನ್ನು ಹುಡುಕುವಂಥ ಜನಗಳಿಂದ ಸತತವಾಗಿ ರೂಪುಗೊಂಡದ್ದಾಗಿದೆ. ಸ್ತ್ರೀದೇಹಕ್ಕೆ ಸಂಬಂಧಿಸಿದಂತೆ ಪುರುಷ ಶರೀರವನ್ನು ರಚಿಸುವುದು ಪುರುಷನನ್ನು ಸವಲತ್ತಿನ ಜಾಗದಲ್ಲಿರುವಂಥ ರೂಢಿಗತವಾದ ಶ್ರೇಣೀಕರಣಗಳನ್ನು ತಿರಸ್ಕರಿಸುವ ಹಾಗೂ ಸಿದ್ಧಮಾದರಿಗಳನ್ನು ಕರಗಿಸಿಬಿಡುವ ಒಂದು ಬ್ರಹ್ಮಾಂಡ ಶಾಸ್ತ್ರದ ಸೃಷ್ಟಿಯಾಗಿದೆ. "ಅರ್ಧನಾರೀಶ್ವರ" ಮತ್ತು "ಚೆನ್ನಮಲ್ಲಿಕಾರ್ಜುನ"ಗಳು ವಾಸ್ತವ ಜಗತ್ತಿನಲ್ಲಿರುವ ತನ್ನ ನೆಲೆಗಾಗಿ ಹುಡುಕುತ್ತಿರುವ "ಆಧ್ಯಾತ್ಮಿಕತೆ"ಯನ್ನು ಸಾಂಕೇತಿಕವಾಗಿ ಪ್ರತಿನಿಧಿಸುತ್ತವೆ. ವಾಸ್ತವ ಲೋಕವನ್ನು ಮೀರುವ ಮೂಲಕವಲ್ಲ, ಅದನ್ನು ಪ್ರತಿರೋಧಿಸುವ ಮೂಲಕ.

–4–

**ಪವಿತ್ರ ಚೈತನ್ಯಕ್ಕಾಗಿ ಹುಡುಕಾಟ : (ಸಂನ್ಯಾಸಿಗಳಿಗೆ) ವಿರಕ್ತರಿಗೆ ಅದರ ಆರೋಪಿತ ಅರ್ಥಗಳು :**

ಈ ಲೋಕದಲ್ಲಿ ಅಕ್ಷರಶಃ "ಆಧ್ಯಾತ್ಮಿಕತೆ"ಯ ಬೆನ್ನು ಹತ್ತಿ ಹೋಗುವವರಿಗೆ ಒದಗುವ ಒಂದು ಪ್ರಮುಖವಾದ ಒತ್ತಾಯವು ವಿಶೇಷವಾಗಿ ಮಧ್ಯಮ ಮತ್ತು ಮೇಲುವರ್ಗದವರಿಗೆ ಹಾಗೂ ಬಡತನ, ಹಸಿವು ಯುದ್ಧಗಳ ಅನುಭವಗಳು ಬಲಿಷ್ಠರು, ಶ್ರೀಮಂತರು ಹಾಗೂ ದಮನಿತರು, ತುಳಿಯಲ್ಪಟ್ಟವರ ನಡುವೆ ವಿಭಕ್ತವಾಗಿರುವ ಪ್ರಪಂಚದಲ್ಲಿ ಸಾಮಾಜಿಕ ಬದುಕಿನ ಅಸಾಂಗತ್ಯದ ಸುತ್ತಲೂ ಹಬ್ಬಿರುತ್ತದೆ. ಸಂಘರ್ಷ ಮತ್ತು ಪಾಶವೀತನಗಳುಳ್ಳ ಜಗತ್ತು ಹುಟ್ಟಿಸುವ ತಳಮಳವು ಕೆಲವು ವ್ಯಕ್ತಿಗಳಲ್ಲಿ ಆಧ್ಯಾತ್ಮಿಕ ಭಾವಾವೇಗವನ್ನು ಹುಟ್ಟು ಹಾಕಿರುತ್ತದೆ. ಇದು

ಅವರನ್ನು ತ್ಯಾಗ ಹಾಗೂ ಸೇವೆಗಳ ಜೀವನಕ್ಕೆ ತಮ್ಮನ್ನು ಬದ್ಧರನ್ನಾಗಿಸಿಕೊಳ್ಳುವ ಕಡೆಗೆ ಕರೆದೊಯ್ಯುತ್ತದೆ. ಮಾನವಕುಲದ ದೊಡ್ಡ ಭಾಗವು ಒಳಗಾಗುವ ಕ್ರೌರ್ಯದ ಅತಿರೇಕದ ರೂಪಗಳು ಹಾಗೂ ಯಾತನೆಗಳು ಇಂಥ ಆತಂಕಗಳಡಿಯಲ್ಲಿ ನುಚ್ಚುನುರಿಯಾಗಿ ದುಃಖತ್ರಸ್ತರಾದ ಮಾನವ ಜನಾಂಗದ ಸೇವೆಗೆ ಯತ್ನಿಸುತ್ತಿರುವಂಥ ವ್ಯಕ್ತಿಗಳನ್ನು "ಆಧ್ಯಾತ್ಮಿಕ" ಸ್ವತ್ವಕ್ಕಾಗಿ ಹುಡುಕಾಡುವಂತೆ ಪ್ರೇರೇಪಿಸುತ್ತವೆ. ಈ ವಿಷಯದಲ್ಲಿ "ಆಧ್ಯಾತ್ಮಿಕತೆ"ಯು ಕತ್ತಲು ಮತ್ತು ಯಾತನೆಗಳ ರಾಜ್ಯದಲ್ಲಿ ನೆಲೆಗೊಂಡಿರುತ್ತದೆ.

ನನ್ನ ಪ್ರಬಂಧವನ್ನು ಮುಕ್ತಾಯ ಮಾಡುವ ಮೊದಲು ನಾನು ಸಂನ್ಯಾಸಿಗಳಿಗೆ (ವಿರಕ್ತರ) ಆಧ್ಯಾತ್ಮಿಕ ನಿಲುವುಗಳ ಪರಿಣಾಮಗಳನ್ನು ನಿಮ್ಮ ಮುಂದಿಡಲು ಪ್ರಯತ್ನಿಸುತ್ತೇನೆ. ಸ್ಥೂಲವಾಗಿ ಹೇಳುವುದಾದರೆ, ಇಂತಹ ಪರಿಣಾಮಗಳು ಎರಡು ಮುಖ್ಯ ರೀತಿಗಳದ್ದಾಗಿರುತ್ತವೆ. ಮೊದಲನೆಯದನ್ನು ಒಂದು 'ಪಠ್ಯ'ದ ಪರಾಮರ್ಶೆಯ ಮೂಲಕ ನಾನು ಚರ್ಚಿಸುತ್ತೇನೆ. ಎರಡನೆಯದನ್ನು ನಮ್ಮದೇ ಕಾಲದ ಒಂದು ಚಾರಿತ್ರಿಕ ಆಕೃತಿಯ ಮೂಲಕ ಚರ್ಚಿಸುತ್ತೇನೆ. "ಆಧ್ಯಾತ್ಮಿಕತೆ"ಯ ಪಶ್ನೆಯು ಎಷ್ಟು ಅತಿರೇಕದ ಸಂಕೀರ್ಣತೆಯುಳ್ಳದ್ದು ಮತ್ತು ಸಮಸ್ಯಾತ್ಮಕವಾದದ್ದು ಎಂಬುದನ್ನು ತೋರಿಸಲು ನಾನು ಈ ಉದಾಹರಣೆಗಳನ್ನು ನೀಡುತ್ತಿದ್ದೇನೆ.

ಟಿ.ಎಸ್. ಎಲಿಯಟ್‌ನ 'The Cocktail Party' ನಾಟಕದಲ್ಲಿ ಬರುವ Celia ಒಬ್ಬ ಆಧ್ಯಾತ್ಮವಾದಿ. ಆಕೆಯ ಆಧ್ಯಾತ್ಮಿಕತೆಯ ಸ್ವರೂಪವು ಪರಿಸ್ಥಿತಿಗಳಿಂದಲೂ ವೈಯಕ್ತಿಕ ಒಲವಿನಿಂದಲೂ ರೂಪುಗೊಂಡದ್ದಾಗಿದೆ. ಅವಳ ಸುತ್ತ ಇರುವ ಯಾವುದಕ್ಕೂ ಬಗ್ಗದ ಕಳಪೆ ಚೇತನಗಳು ಎಡೆಬಿಡದೆ ನಡೆಸುವ ಕಾಕ್‌ಟೇಲ್ ಪಾರ್ಟಿಗಳೂ ಆಕೆಯ ಆಧ್ಯಾತ್ಮಿಕ ಭಾವಾವೇಗಕ್ಕೆ ಬಲ ನೀಡುತ್ತವೆ. ತನ್ನ ಬದುಕಿಗೆ ಒಂದು ಅರ್ಥವನ್ನು ಕಟ್ಟಿಕೊಳ್ಳಲು ಅವಳು ಸಮರ್ಪಣಾ ವಿಧಿಯ ರೀತಿಯಲ್ಲಿ ಸಂನ್ಯಾಸವನ್ನು ಸ್ವೀಕರಿಸುತ್ತಾಳೆ. ಒಬ್ಬ ಮಿಷನರಿಯಾಗಿ ಒಂದು ಬುಡಕಟ್ಟು ಸಮಾಜಕ್ಕೆ ತೆರಳುತ್ತಾಳೆ. ಆದರೆ ಅದು ದೈಹಿಕವಾಗಿ ವಿನಾಶ ಹೊಂದಲೆಂದೇ ಹೋದಂತಾಗುತ್ತದೆ. ಆದರೆ ಮೋಕ್ಷವನ್ನು ಅವಿಚಲ ಪ್ರಯತ್ನದಿಂದ ಸಾಧಿಸಬೇಕೆನ್ನುವ ಅವಳ ನಿರ್ಧಾರ ಮಾತ್ರ ಅಚಲವಾದದ್ದು. ಬುಡಕಟ್ಟು ಜನರು ನೆಲೆಸಿದ್ದ ತೀರಾ ಒಳನಾಡಿಗೆ ಹೋಗುವ ಸಿಲಿಯಾಳ ಆಯ್ಕೆಯ ಬಗ್ಗೆ ವಿಮರ್ಶಕರು ಎತ್ತುವ ದೊಡ್ಡ ಆಕ್ಷೇಪವೆಂದರೆ ಅದು "ಜೀವ-ವಿರೋಧಿ" ಎಂಬುದು. ಸಿಲಿಯಾ ದೇಹದ ಬಗ್ಗೆ ತೋರುವ ತೀವ್ರ ನಿರಾಕರಣೆ, ಭೌತಿಕ ಚೇತನದ ಬಗೆಗಿನ ಪೂರ್ಣ ನಿರ್ಲಕ್ಷ್ಯಗಳು ಒಬ್ಬ ಧರ್ಮಪ್ರಚಾರಕಳಾಗಿ ಅವಳ "ಹುತಾತ್ಮತೆ"ಯನ್ನು ಸಾಧಿಸುತ್ತವೆ ಎನ್ನುವುದು ಕಟು ಟೀಕೆಗೆ ಒಳಗಾಗಿದೆ. ಪರಿಣಾಮದಲ್ಲಿ ಇಂತಹ "ಆಧ್ಯಾತ್ಮಿಕತೆ"ಯು, ವಿಶೇಷತಃ ಮಹಿಳೆಯರ ಸಂಬಂಧದಲ್ಲಿ, ಆತ್ಮ-ಘಾತುಕವಾಗಿದ್ದು, ಇದನ್ನು ವಿರೋಧಿಸುವಾಗ ಇದರ ಅರ್ಥವನ್ನು ತಿರುಚಬಾರದು ಅಥವಾ ಸುಲಭವಾಗಿ ತಳ್ಳಿಹಾಕಲೂಬಾರದು.





ಮದರ್‌ಥೆರೆಸಾ

ನಾನು ಸೂಚಿಸುವ ಚಾರಿತ್ರಿಕ ವ್ಯಕ್ತಿ ಮದರ್‌ಥೆರೆಸಾ. ಮದರ್‌ಥೆರೆಸಾ ಅವರ "ಆಧ್ಯಾತ್ಮಿಕತೆ"ಯನ್ನೂ ಪ್ರಶ್ನಿಸುತ್ತಿರುವ ಅನೇಕರಿದ್ದಾರೆ – ಎನ್ನುವುದು ನಮ್ಮ ಕಾಲದ ಸಂಕೀರ್ಣತೆಯ ಸೂಚಕ. ಸಮಾಜ ಹಾಗೂ ಸರ್ಕಾರಗಳೆರಡರಿಂದಲೂ ಒಂದೇ ಮಟ್ಟದ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಕೋಟ್ಯಾಂತರ ಜನರಿಗೆ ಮದರ್‌ಥೆರೆಸಾ ಶ್ರದ್ಧೆಯಿಂದ ಸೇವೆ ಮಾಡಿದರೆಂಬ ಬಗ್ಗೆ ಎರಡು ಅಭಿಪ್ರಾಯವಿಲ್ಲ. ಆದರೆ ಮದರ್ ಥೆರೆಸಾ ಅವರ ಆಧ್ಯಾತ್ಮಿಕತೆಗೆ ಒಂದು ಪರ್ಯಾಯರೂಪವು ತೀವ್ರಗಾಮಿ ರಾಜಕೀಯ ಪ್ರಜ್ಞೆಯಿಂದ ಹೊಮ್ಮಿದಾಗಲೇ ನಿಜವಾದ ಸಮಸ್ಯೆ ಎದುರಾಗುವುದು. ಮದರ್‌ಥೆರೆಸಾ ತಮ್ಮ ಸೇವೆಗೆ ಧನ ಸಂಪನ್ಮೂಲ ಎಲ್ಲಿಂದ ಬಂದದ್ದು, ಯಾರು ಅದನ್ನು ನೀಡುತ್ತಿರುವ ದಾನಿಗಳು ಎಂಬುದನ್ನು ತಿಳಿಯಲು ಎಂದೂ ತಲೆಕೆಡಿಸಿಕೊಳ್ಳಲಿಲ್ಲ ಎಂದು ಭಾವಿಸುವವರು ಮದರ್‌ಥೆರೆಸಾ ಅವರ "ಆಧ್ಯಾತ್ಮಿಕತೆ" ಎನ್ನುವುದನ್ನು ರಾಜಕೀಯಾತೀತ, ನೈತಿಕತಾತೀತ ಕೇಂದ್ರಗಳಲ್ಲಿ ನೆಲೆಗೊಳಿಸುತ್ತಾರೆ. ಅನೇಕ ಸಲ ನಿರಂಕುಶಾಧಿಕಾರಿಗಳು, ಮಿಲಿಟರಿ ಜನರಲ್‌ಗಳು, ನಿಷ್ಕರುಣೆಯಿಂದ ಜನರ ಜೀವಗಳನ್ನೂ ಜನತಂತ್ರವನ್ನೂ ಹತ್ತಿಕ್ಕಿದಂಥವರೂ ಮದರ್‌ಥೆರೆಸಾ ಅವರ ಸೇವಾಕಾರ್ಯಗಳಿಗೆ ಧನ ಸಹಾಯ ಒದಗಿಸಿದವರಾಗಿದ್ದಾರೆ ಎಂದು ಇವರು ವಾದಿಸುತ್ತಾರೆ. ಆಧ್ಯಾತ್ಮಿಕ ನಿಲುವಿನಲ್ಲಿ ಆಕೆ ತೋರಿಸುವ ತಟಸ್ಥಭಾವವನ್ನು ತೀವ್ರಗಾಮಿಗಳು ಪ್ರಶ್ನಿಸುತ್ತಾರೆ.

ಸಿಲಿಯಾ ಹಾಗೂ ಮದರ್‌ಥೆರೆಸಾ ಅವರ ಉದಾಹರಣೆಗಳ ಮೂಲಕ ನಾನು ಪ್ರತಿಪಾದಿಸಲು ಬಯಸುವುದು ಇದು, ಸಾಮಾಜಿಕ – ಚಾರಿತ್ರಿಕ ಚೌಕಟ್ಟುಗಳಿಂದ ಹೊಮ್ಮಿಬರುವ ವಿರೋಧಾಭಾಸಗಳು ಬಹುದೊಡ್ಡ ಪ್ರಮಾಣದ್ದು, ಹಾಗೂ ಅವುಗಳ ಒಳವಿರೋಧಗಳು ಗಹನವಾದದ್ದು. ನಮ್ಮ ಎಲ್ಲ ಚಾರಿತ್ರಿಕ ವ್ಯಕ್ತಿಗಳೂ, ಕಥನಗಳೂ, ಸಾಂಸ್ಕೃತಿಕ ಸಂಕಥನಗಳೂ ಇಂತಹ ವಿರೋಧಾಭಾಸಗಳ ಹಾಗೂ ಒಳವಿರೋಧಗಳ ಬಲವಾದ ಸೂಚಕಗಳಾಗಿವೆ. ಕೋಟಿಗಟ್ಟಲೆ ಸಂಖ್ಯೆಯ ಮುಖವೇ ಇರದ ಸ್ತ್ರೀಯರೂ, ಪುರುಷರೂ ಕತ್ತಲ ಮೂಲೆಗಳಲ್ಲಿ ವಾಸಿಸುತ್ತಿರುವಂಥ ಜಾಗತೀಕರಣಗೊಂಡ ಪ್ರಪಂಚದಲ್ಲಿ ಆಧ್ಯಾತ್ಮಿಕತೆಯ ರಾಜಕೀಯ ಸ್ಥಾನನಿರ್ದೇಶನವನ್ನು ಅರ್ಥಮಾಡಿಕೊಳ್ಳಲು ತುಂಬ ಹೆಚ್ಚಿನ ಬೌದ್ಧಿಕ ಸ್ಪಷ್ಟತೆ ಹಾಗೂ ಶಕ್ತಿಗಳ ಅವಶ್ಯಕತೆಯಿದೆ ಎಂದು. "ಆಧ್ಯಾತ್ಮಿಕತೆ"ಯನ್ನು, ವಿಶೇಷವಾಗಿ ಮಹಿಳೆಯರ ಆಧ್ಯಾತ್ಮಿಕತೆಯನ್ನು ಅದನ್ನು ಅರಸುವ ಪ್ರತಿಯೊಬ್ಬ ಮಹಿಳೆಗೂ ಸವಲತ್ತು ದೊರಕಿಸುವ ತರಹ ಸ್ಥಾನನಿರ್ದೇಶನ ಮಾಡುವುದು ಸಾಧ್ಯವಿಲ್ಲ. ಅಥವಾ ಕೋಟ್ಯಂತರ

ಮಹಿಳೆಯರನ್ನು ಅವರಿರುವ ಜಾಗಗಳಲ್ಲೇ ಬಿಟ್ಟು, ಅದನ್ನು ಗಳಿಸಿಕೊಳ್ಳುವುದೂ ಅಸಾಧ್ಯ. ಅಪವಾದಗಳಂತಹ ಸ್ತ್ರೀಯರೂ ಪುರುಷರೂ ಪಯಣಿಸುವಂಥ ಅಪರೂಪದ ಬ್ರಹ್ಮಾಂಡವನ್ನು ಸೃಷ್ಟಿಸುವುದು, ಬಹಳಷ್ಟು ಮಾನವ ಜೀವಿಗಳು ನೆಲೆಸಿರುವಂಥ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಜಾಗಗಳನ್ನು ಪಲ್ಲಟಗೊಳಿಸುವಂತಹ ಶಬ್ದಗಳಿಂದ "ಆಧ್ಯಾತ್ಮಿಕತೆ" ಎಂಬುದನ್ನು ವಿವರಿಸುವುದೂ ಸಾಧ್ಯವಿಲ್ಲ. ಅದೇ ಕಾಲದಲ್ಲಿ "ಆಧ್ಯಾತ್ಮಿಕತೆ" ಎಂಬುದು ಮಾನವರ ಸ್ವತ್ವದ ಬೆಲೆತೆತ್ತು, ತನ್ನನ್ನು ಸವಲತ್ತುಗೊಳಿಸಿಕೊಳ್ಳುವಂಥ ವ್ಯರ್ಥವಾದ, ಅಮೂರ್ತವಾದ, ರಹಸ್ಯಕರ ಸೈದ್ಧಾಂತಿಕ ಸೂತ್ರವೂ ಆಗಬಾರದು. ವ್ಯಕ್ತಿಗತವಾದ ಆಧ್ಯಾತ್ಮಿಕವಾದಿಯನ್ನೂ, ಅಮೂರ್ತವಾದ, ಆಕಾರರಹಿತ ಸಿದ್ಧಾಂತ ತಜ್ಞನನ್ನೂ ಸವಲತ್ತುಗೊಳಿಸುವುದನ್ನು ತಪ್ಪಿಸುವುದೇ ನನ್ನ ಈ ಪ್ರಯತ್ನವಾಗಿದೆ. "ಆಧ್ಯಾತ್ಮಿಕತೆ" ಎಷ್ಟು ಬಹುಸಂಖ್ಯೆಯ ನೆಲೆಗಳುಳ್ಳದ್ದು ಎಂಬುದನ್ನು ಕಾಣುವುದು, ಅದನ್ನು ನಿಮ್ಮೊಂದಿಗೆ ಹಂಚಿಕೊಳ್ಳುವುದರಲ್ಲಿ ಉದ್ದಕ್ಕೂ ನನ್ನನ್ನು ನಿರಾಶ್ರಿತತೆ, ಉಪವಾಸ, ಕೋಮು ಸಂಘರ್ಷಗಳು, ಧಾರ್ಮಿಕ ಮತಾಂಧತೆ, ಅಲ್ಪಕೂಲಿಗಾಗಿ ದಿನದಲ್ಲಿ 14ರಿಂದ 16 ಗಂಟೆಗಳ ಕಾಲ ದುಡಿಯುವ ಹಾಗೂ ಲೈಂಗಿಕ ದೌರ್ಜನ್ಯಗಳಿಂದ ತಮ್ಮನ್ನು ಸುಟ್ಟುಕೊಳ್ಳುತ್ತಿರುವ ಸ್ಥಿತಿಗತಿಗಳು ನನ್ನನ್ನು ಪ್ರೇರಿಸುತ್ತಿವೆ. ಇಂದಿನ ಜಾಗತೀಕರಣಗೊಂಡ ಪ್ರಪಂಚದಲ್ಲಿ "ಆಧ್ಯಾತ್ಮಿಕತೆ" ಕೂಡ ನೀಟಾದ ಒಂದು ಪ್ಯಾಕೇಜ್ ಆಗಿದ್ದು ದೇವತಾ ಪುರುಷರು ಆಧುನಿಕೋತ್ತರ ಸ್ವಾಮೀಜಿಗಳ ಮಾರಿಗೆಯ ಸರಕಾಗಿದೆ. ಅಂಥವರಲ್ಲಿ ಕಾರ್ಪೊರೇಟ್ ಎಕ್ಸಿಕ್ಯೂಟಿವ್‌ಗಳಿಗಿಂತಲೂ ಪರಿಣಾಮಕಾರಿಯಾಗಿ ಕೆಲಸಮಾಡುತ್ತಿರುವ ಒಬ್ಬ ಸ್ವಾಮೀಜಿ ತನ್ನ ಆಧ್ಯಾತ್ಮಿಕ ಪ್ಯಾಕೇಜಿಗೆ ಪೇಟೆಂಟ್ ಕೂಡ ಮಾಡಿಸಿದ್ದು ವರದಿಯಾಗಿದೆ. ಹೀಗೆ "ಆಧ್ಯಾತ್ಮಿಕತೆ" ಕಾರ್ಪೊರೇಟ್‌ಗೊಂಡಿರುವುದು "ಆಧ್ಯಾತ್ಮಿಕತೆ"ಗೆ ಇನ್ನೂ ಒಂದು ನೆಲೆಯನ್ನು ಸೃಷ್ಟಿಸುವ ವಿದ್ಯಮಾನವಾಗಿದೆ. ಇವೆಲ್ಲದರ ನಡುವೆ, ಅದರ ಬಗೆಗಿನ ಅಸ್ಪಷ್ಟ ಸಾಧಾರಣೀಕರಣಗಳನ್ನು ನಿವಾರಿಸಲಿಕ್ಕಾಗಿ ತುಂಬ ಮಹತ್ವದ್ದಾಗಿ ಎಲ್ಲರದೂ ಜೀವಂತ ಅನುಭವಗಳನ್ನು ಒಳಗೊಳ್ಳಬಲ್ಲ ರೀತಿಯ ಹೊಸ ಸಾಂಸ್ಕೃತಿಕ ರಾಜಕೀಯವನ್ನು ಹೇಳುವುದಕ್ಕಾಗಿ ಮಹಿಳೆಯರು ಮತ್ತು ಆಧ್ಯಾತ್ಮಿಕತೆಯ ನಡುವಿನ ಗಂಭೀರವಾದ ಸಂಬಂಧವನ್ನು ಇನ್ನೂ ಹೆಚ್ಚಿನ ತೀವ್ರತೆಯಿಂದ ಅರ್ಥಮಾಡಿಕೊಳ್ಳುವುದು ಅತ್ಯವಶ್ಯಕವಾಗಿದೆ.

ಅನುವಾದ

*ಡಾ. ಬಿ.ಎನ್. ಸುಮಿತ್ರಾಬಾಯಿ*

ಮಹಿಳೆಯರು ಮತ್ತು ಆಧ್ಯಾತ್ಮಿಕತೆ

ಪ್ರತಿಕ್ರಿಯೆ

# ಇರಲಿ ಶೂನ್ಯಗಳು ಸಿಂಹಾಸನಗಳು

• *ಸ. ಉಷಾ*

ಆಧ್ಯಾತ್ಮವೆನ್ನುವುದು concious awareness of an ultimate reality ಎಂದು ಸೂತ್ರವಾಕ್ಯಗಳು ಹೇಳುತ್ತವೆ.

ಎಲ್ಲ ಧರ್ಮಗಳಲ್ಲಿ ಆಧ್ಯಾತ್ಮದ ಒಳಹರಿವು ಇದೆ. ವೇದಾಂತ, ಸೂಫಿಸಂ, ಜ್ಯೂಗಳ ಕಬಾಲಾ, ಹಿಂದೂ ಧರ್ಮದೊಳಗೇ ಇದ್ದು ಪ್ರತಿಭಟಿಸುವ ಬೇರೆ ಬೇರೆ ಧರ್ಮಗಳ ಸಿದ್ಧಾಂತಗಳು, ಕ್ರಿಶ್ಚಿಯನ್ ಮಿಸ್ಟಿಸಿಸಂ ಇವೆಲ್ಲವನ್ನೂ ಗೌರವಿಸುವ ಜನರಿರುವಂತೆಯೇ ಪ್ರಶ್ನಿಸುವವರೂ, ಸಂದೇಹದಿಂದ ನೋಡುವವರೂ ಇದ್ದಾರೆ.

ಇವುಗಳನ್ನು ಸಂದೇಹದಿಂದ ನೋಡಲು ಮುಖ್ಯ ಕಾರಣ – ವೈಯಕ್ತಿಕವಾದ ನೇರ ಅನುಭವ ಮತ್ತು ಅಂತರ್ಬೋಧದ ಮೇಲೆ ಇವು ಒತ್ತು ಕೊಡುವುದು.

ಭಾರತದ ಸಂದರ್ಭದಲ್ಲಿ ಆಧ್ಯಾತ್ಮವೆನ್ನುವುದು ಕೆಲವರ ಸೊತ್ತಾದಾಗ ಅಥವಾ ಅದರ ಸಾಧನೆಗೆ ಕೆಲವರು ಹೊರತಾದಾಗ ಸಮಸ್ಯೆಗಳು ಹುಟ್ಟಿಕೊಂಡವು. ಹಾಗೇ ಹೊಸ ಆಧ್ಯಾತ್ಮವೂ ಹುಟ್ಟಿತು.

ಜಾಬಾಲಿಯ ಕಥೆ, ಧರ್ಮವ್ಯಾಧನ ಕಥೆ, ಶಂಕರಾಚಾರ್ಯರಿಗೆ ಚಂಡಾಲನು ಆತ್ಮಬೋಧೆ ಮಾಡಿದ ಕಥೆ – ಈ ಥರದ ಅನೇಕ ಕಥೆಗಳು ಒಳಗಿನ ಕಾವ್ಯಾತ್ಮಕ ಪ್ರತಿಭಟನೆಗಳು.

ದಲಿತ ವಚನಕಾರನೊಬ್ಬ

**"ಶರಣರೆಲ್ಲರು ಶಿವಪೂಜೆಗೆ ನೆರೆದರು**
**ನಾನವರ ಪಾದುಕೆಯ ಕಾಯ್ದುಕೊಂಡಿದ್ದೆನಯ್ಯ"**

ಎನ್ನುವಾಗಲೋ,

ಕವಯಿತ್ರಿಯೊಬ್ಬಳು

**ನಾನು ತಂಗಿ**
**ಅಕ್ಕನ ನೆನಪಿಗೆ ನಾಲ್ಕು ಕದಳಿ ಸಸಿ ಸಾಕಿಕೊಂಡಿದ್ದೇನೆ**

ಎನ್ನುವಾಗಲೋ

**ಇರಲಿರಲಿ ಶೂನ್ಯಗಳು ಸಿಂಹಾಸನಗಳು**
**ನಿಮ್ಮ ನಡೆಯಡಿಯ ತೊರೆದು**
**ಹೋಗುತ್ತೇನೆ**
**ಕದಳಿಗೆ**

ಎನ್ನುವಾಗಲೋ

ಒಂದು ಹೊಸ ಆಧ್ಯಾತ್ಮದ ರೂಪುರೇಖೆಗಳು ಕಾಣುತ್ತವೆ.

ಮನುಚಕ್ರವರ್ತಿಯವರು ಆಧ್ಯಾತ್ಮವೆಂಬುದು ಬಹುಸ್ತರದ ನೆಲೆಗಳುಳ್ಳದ್ದು ಎಂದು ಸರಿಯಾಗಿಯೇ ಗುರ್ತಿಸಿದ್ದಾರೆ. ನನಗೆ ಈ ಲೇಖನದಲ್ಲಿ ಬಹುಮುಖ್ಯವೆನಿಸಿದ್ದು ಇದರ ಕೊನೆಯ ಭಾಗ.

"ಅಸ್ಪಷ್ಟ ಸಾಧಾರಣೀಕರಣಗಳನ್ನು ನಿವಾರಿಸಲಿಕ್ಕಾಗಿ ತುಂಬ ಮಹತ್ವದ್ದಾಗಿ ಎಲ್ಲರದೂ ಜೀವಂತ ಅನುಭವಗಳನ್ನು ಒಳಗೊಳ್ಳಬಲ್ಲ ರೀತಿಯ ಹೊಸ ಸಾಂಸ್ಕೃತಿಕ ರಾಜಕೀಯವನ್ನು ಹೇಳುವುದಕ್ಕಾಗಿ. ಮಹಿಳೆಯರು ಮತ್ತು ಆಧ್ಯಾತ್ಮಿಕತೆಯ ನಡುವಿನ ಗಂಭೀರವಾದ ಸಂಬಂಧವನ್ನು ಇನ್ನೂ ಹೆಚ್ಚಿನ ತೀವ್ರತೆಯಿಂದ ಅರ್ಥಮಾಡಿಕೊಳ್ಳುವುದು ಅತ್ಯವಶ್ಯಕವಾಗಿದೆ".

ನನಗನಿಸುತ್ತದೆ ಈ ಪ್ರಕ್ರಿಯೆ ಕಲಾಪ್ರಕಾರಗಳಲ್ಲಿ ನಿರಂತರವಾಗಿ ಇದ್ದೇ ಇದೆ. ಅದನ್ನು ಕಾಣುವ ಕಣ್ಣು ಮತ್ತು ಅದಕ್ಕೆ ತಾತ್ತ್ವಿಕ ರೂಪ ಕೊಡುವುದು ಬಾಕಿ ಇದೆ. ❑

ಪ್ರತಿಕ್ರಿಯೆ

# ಮಹಿಳೆಯರು ಮತ್ತು ಆಧ್ಯಾತ್ಮಿಕತೆ

● *ಡಾ. ಜಿ. ರಾಮಕೃಷ್ಣ*

ಮಾನ್ಯ ಪ್ರೊ. ಎನ್. ಮನುಚಕ್ರವರ್ತಿಯವರ ಲೇಖನಕ್ಕೆ ಒಂದು ಪ್ರತಿಕ್ರಿಯೆಯಾಗಿ ಟಿಪ್ಪಣಿ ಬರೆಯಲು ನನಗೆ ಬಹಳ ಅಳುಕಿದೆ. ಏಕೆಂದರೆ, ಅವರು ಹೇಳಹೊರಟಿರುವುದನ್ನೆಲ್ಲಾ ನಾನು ಸರಿಯಾಗಿ ಗ್ರಹಿಸಿದ್ದೇನೆಂಬ ಭರವಸೆ ನನಗಿಲ್ಲ. ಈಚಿನ ವಿದ್ವತ್ಪೂರ್ಣ ಲೇಖನಗಳ ಮಾದರಿಯು ನನ್ನನ್ನು ದಂಗುಗೊಳಿಸುತ್ತದೆ. ಲೇಖನದ ಪರಿಭಾಷೆಯನ್ನು ಅರ್ಥಮಾಡಿಕೊಂಡು ವಿಮರ್ಶಿಸುವ ಪದ್ಧತಿ ಅಂಗೀಕಾರ್ಹವಾದ್ದು. ಆದರೆ ಲೇಖನಗಳ ಒಳಹೊಕ್ಕು ಅವುಗಳ ಆಶಯವೇನೆಂದು ಪೂರ್ಣಪ್ರಮಾಣದಲ್ಲಿ ಗ್ರಹಿಸುವುದು ನನಗೆ ಅಶಕ್ಯವಾಗಿದೆ. ಅದಕ್ಕೆ ಕಾರಣ ಈಚಿನ ದಶಕಗಳಲ್ಲಿ ವಿದ್ವತ್ಪ್ರಪಂಚದಲ್ಲಿ ಕಂಡುಬಂದಿರುವ ಬದಲಾವಣೆಗಳು, ವಿಶೇಷತಃ ಅವುಗಳ ಕ್ಲಿಷ್ಟವಾದ ಭಾಷೆ. ಪರಿಚಯವಿರುವವರಿಗೆ ಅದು ಕ್ಲಿಷ್ಟವಲ್ಲದಿರಬಹುದು, ಆದರೆ ನನಗೆ ನಿಜಕ್ಕೂ ಅದು ಕ್ಲಿಷ್ಟವೇ. ಮೂರು-ನಾಲ್ಕು ದಶಕಗಳ ಹಿಂದೆ ವಿದ್ವಾಂಸರು ಸರಳವಾದ ಭಾಷೆಯನ್ನು ಬಳಸುತ್ತಿದ್ದರು. ಉದಾಹರಣೆಗೆ, ತೀ.ನಂ.ಶ್ರೀ. ಎ.ಎನ್.ಮೂರ್ತಿರಾವ್, ಎಂ.ಯಾಮುನಾಚಾರ್ಯ ಮುಂತಾದವರು. ಅವರು ಬರೆದದ್ದನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲು ಕಲಿತಿದ್ದೆವು. ಅದಕ್ಕೆ ಒಗ್ಗಿಹೋಗಿದ್ದರಿಂದ ಈಚಿನ ಶೈಲಿ, ಪರಿಭಾಷೆ ಮತ್ತು ವಾದಸರಣಿ ನನ್ನಂಥವರಿಗೆ ವೇದ್ಯವಾಗುವುದಿಲ್ಲ. ಸುಮ್ಮನೆ ಕಣ್ಣು-ಕಣ್ಣು ಬಿಡುತ್ತಾ ಕುಳಿತುಕೊಳ್ಳಬೇಕಾದ ಸನ್ನಿವೇಶ. ಅಮೆರಿಕಾದ ಸೊಕಾಲ್ ಎಂಬ ವಿದ್ವಾಂಸನೂ ನನ್ನಂಥವರ ಸಾಲಿನವನೇ. ಆದರೆ ಅವನು ಹೊಸ ಶೈಲಿ ಮತ್ತು ಪರಿಭಾಷೆಗಳನ್ನು ಮೈಗೂಡಿಸಿಕೊಂಡು ಅದನ್ನೇ ಬಳಸಿ ಅದರ ಅಧ್ವರ್ಯುಗಳನ್ನು ಬೆಚ್ಚಿಬೀಳಿಸಿದ್ದ. ನಾನದನ್ನು ಮಾಡಲು ಸಮರ್ಥನಲ್ಲ.

ಮಾನ್ಯ ಪ್ರೊ. ಮನು ಚಕ್ರವರ್ತಿಯವರ ವಾದ ನನಗೆ ಸಮಗ್ರವಾಗಿ ಅರ್ಥವಾಗಿಲ್ಲವೆಂದರೆ ಅವರು ತರ್ಕದಲ್ಲೆಲ್ಲೋ ಎಡವಿದ್ದಾರೆಂದು ನನ್ನ ಸೂಚನೆಯಲ್ಲ. ನನ್ನ ಮಿತಿಯಲ್ಲಿ ಮಾತ್ರವೇ ನನ್ನ ಒಂದೆರಡು ಅನಿಸಿಕೆಗಳನ್ನು ಪ್ರಕಟಗೊಳಿಸಲು ಅನುಮತಿ ಬೇಡುವುದಕ್ಕಾಗಿಯಷ್ಟೇ ಈ ನನ್ನ ಪೀಠಿಕೆಯನ್ನು ಓದುಗರ ಮುಂದಿರಿಸುತ್ತಿದ್ದೇನೆ.

(ಅ) ಆಧ್ಯಾತ್ಮಿಕತೆಯ ಲಕ್ಷಣಗಳನ್ನು ಯಾರು ಹೇಗೆ ಬೇಕಾದರೂ ನಿರೂಪಿಸಿರಲಿ, ಅದು ನನಗೆ ಗೌಣ. ಮೂಲತಃ ಅದು ಆತ್ಮ - ಪರಮಾತ್ಮರ ಸಂಬಂಧವನ್ನು ಪ್ರತಿಪಾದಿಸುವ ಪರಿಕಲ್ಪನೆಯಲ್ಲ. ಜಗತ್ತಿನ ವಿಸ್ಮಯ ಗಾಢವಾದದ್ದು. ಅದರೊಡನೆ ಸಮೀಕರಣ ಸಾಧಿಸಿಕೊಳ್ಳುವುದು ಅಸಾಧ್ಯವಲ್ಲದಿರಬಹುದು, ಆದರೆ ಕಷ್ಟಕರವಂತೂ ಖಂಡಿತ ಹೌದು. ಅಲ್ಲಿಯ ಅನಿರ್ಬಂಧಿತ ಘಟನೆಗಳನ್ನು ವೀಕ್ಷಿಸುತ್ತಾ ನಮ್ಮ ಮಾನಸಿಕ ವ್ಯಾಪಾರವು ಸ್ಟಾಕ್ ಎಕ್ಸ್‌ಚೇಂಜ್‌ನ ಸೆನ್ಸೆಕ್ಸ್‌ನಂತೆ ಹಠಾತ್ತನೆ ಕುಸಿದುಬಿಡುತ್ತದೆ. ಇದೇನು ಜಂಜಾಟ, ಇದೇನು ಉಪದ್ರವ, ಇದರಿಂದ ಕಳಚಿಕೊಳ್ಳುವುದೆಂತು, ಹಾಗೇನಾದರೂ ಕಳಚಿಕೊಳ್ಳಲು ಸಾಧ್ಯವಾದರೆ ಆಗ ನಮ್ಮ ಮನಸ್ಸಿನ ಸ್ಥಿತಿ ಹೇಗಿರುತ್ತದೆ, ಅದನ್ನು ತಲುಪದಿದ್ದಾಗಲೂ ಅದನ್ನು ಕಲ್ಪಿಸಿಕೊಳ್ಳಲು ಸಾಧ್ಯವೆ ಎಂಬಿತ್ಯಾದಿ ಪ್ರಶ್ನೆಗಳು ಎಷ್ಟೇ ಅಮೂರ್ತವಾದರೂ ಅವು ಮನಸ್ಸನ್ನು ಆಕ್ರಮಿಸಿಕೊಳ್ಳುತ್ತವೆ. ಇದಕ್ಕೆ ಆಸ್ತಿಕ, ನಾಸ್ತಿಕ, ವಿಚಾರವಾದಿ, ವಿಜ್ಞಾನಿ, ಗೊಡ್ಡು ಸಂಪ್ರದಾಯವಾದಿ, ವಿದ್ಯಾವಂತ, ಅನಕ್ಷರಸ್ಥ ಎಂಬ ಭೇದವಾವುದೂ ಇಲ್ಲ. ಅಂತೆಯೇ, ಗಂಡು - ಹೆಣ್ಣು ಎಂಬ ವ್ಯತ್ಯಾಸವೂ ಅಪ್ರಸ್ತುತ. ಸದಾ ಚಲಿಸುತ್ತಿರುವ ಮನಸ್ಸು ಹೊರಗಿನ ಪದಾರ್ಥಗಳನ್ನು ನೋಡುತ್ತಿರುವ ಬದಲು, ತನ್ನನ್ನು ತಾನೇ ನೋಡಿಕೊಳ್ಳುವಂತಾದರೆ ಹೇಗಿರುತ್ತದೆ? ಹಾಗೆ ನೋಡಿಕೊಳ್ಳುವುದರಲ್ಲಿ ಯಶಸ್ಸು ಗಳಿಸುವುದೇ ಆಧ್ಯಾತ್ಮಿಕತೆಯ ಮೆಟ್ಟಿಲುಗಳನ್ನು ಹತ್ತುವ ಪ್ರಕ್ರಿಯೆ. ಹಾಗೆ ನೋಡಿಕೊಂಡಾಗ 'ನೋಡುಗ'ನು ತನ್ನ ನಿಜಸ್ವರೂಪದಲ್ಲಿ ಇರುತ್ತಾನೆಂದು ಪತಂಜಲಿಯ ಯೋಗಸೂತ್ರ ಹೇಳುತ್ತದೆ (ತದಾ ದ್ರಷ್ಟುಃ ಸ್ವರೂಪೇ ಅವಸ್ಥಾನಮ್). ನೋಡುಗ, ನೋಡಲ್ಪಟ್ಟದ್ದು ಮತ್ತು ನೋಡುವ ಕ್ರಿಯೆ, ಇವೆಲ್ಲಾ ನಶಿಸಿಹೋಗಿ ಕೇವಲ ನೋಡುಗ ಮಾತ್ರ ಉಳಿಯುವುದು ಆಧ್ಯಾತ್ಮಿಕತೆಯ ಉನ್ನತ ಮಜಲು. 1950-60ರ ದಶಕಗಳಲ್ಲಿ ಕೊಳ್ಳೇಗಾಲದಲ್ಲಿ ಪುಣ್ಯಾವತಮ್ಮ ಎಂಬೊಬ್ಬಾಕೆ ಇದ್ದರು. ಆಗಾಗ್ಗೆ ಮೈಸೂರಿಗೆ ಬರುತ್ತಿದ್ದರು. ಬಹಳ ಒಳ್ಳೆಯ ಹೆಂಗಸು ಆಕೆ. ಅತ್ಯಂತ ವಿನಯವಂತೆ, ಮಾನವಪ್ರೇಮಿ, ಸದಾ ಸಹಾಯಹಸ್ತ ನೀಡಲು ಹಂಬಲಿಸುವಂಥವರು. ಸ್ವಂತದ ಅಗತ್ಯಗಳನ್ನು ಕನಿಷ್ಠ ಮಟ್ಟಕ್ಕೆ ಇಳಿಸಿದ್ದಾಕೆ, ಹಸನ್ಮುಖಿ, ಮಿತಭಾಷಿ. ಹೀಗೆ ಅವರ ಲಕ್ಷಣಗಳನ್ನು ಪಟ್ಟಿ ಮಾಡಬಹುದು. ನನಗಿಂತಲೂ ಸುಮಾರು ಮೂವತ್ತು ವರ್ಷ ಹಿರಿಯರು. ಬಹಳ ಆತ್ಮೀಯರು. ಅವರನ್ನು ಹಾಸ್ಯ ಮಾಡಿದಾಗಲೂ ಬಹಳ ಖುಷಿಯಿಂದಲೇ ಇರುತ್ತಿದ್ದ ಆದರಣೀಯ ಮಹಿಳೆ. ನಾನು ನೋಡಿರುವ ಮೆಟ್ಟಮೊದಲ ಆಧ್ಯಾತ್ಮಿಕ ಅನುಭಾವಿ ಆಕೆ. ಅವರಿಗೆ ಮದುವೆಯಾಗಿರಲಿಲ್ಲ. ಏಕೆಂದು ನನಗೆ ಗೊತ್ತಿಲ್ಲ. ಆದರೆ ಗಂಡಸು - ಹೆಂಗಸು ಎಂಬ ಭೇದವು ಅವರನ್ನು ಎಂದೂ ಕಾಡಿದ್ದಂತೆ ನನಗನಿಸುತ್ತಿರಲಿಲ್ಲ. ಮುಂದಿನ ದಿನಗಳಲ್ಲಿ ಅವರ ಮಾಪನ ಮಾಡಲು ತವಕಿಸಿದ್ದೇನೆ. ನಾನು ಅವರನ್ನು ಹೇಗೆ ಕಾಣುತ್ತಿದ್ದೆ, ಬೇರೆ ಹಿರಿಯ ಗಂಡಸರು ಹೇಗೆ ಕಾಣುತ್ತಿದ್ದರು, ಅವರ ವಯಸ್ಸಿನ ಬೇರೆ ಮಹಿಳೆಯರು ಹೇಗೆ ನಡೆಸಿಕೊಳ್ಳುತ್ತಿದ್ದರು, ಸ್ತ್ರೀವಾದಿಗಳು ಹೇಗೆ ಕಾಣುತ್ತಿರಬಹುದಿತ್ತು, ವಿಚಾರವಾದಿಗಳು ಅವರನ್ನು ಕುರಿತು ಏನೇನು ಹೇಳಬಹುದಿತ್ತು ಎಂಬಿತ್ಯಾದಿ ಪ್ರಶ್ನೆಗಳನ್ನು ಎಷ್ಟೋ ಸಲ ಗಂಭೀರವಾಗಿಯೇ ಹಾಕಿಕೊಂಡಿದ್ದೇನೆ. ನನಗೆ ಹೊಳೆದಿರುವ ಉತ್ತರಗಳು ಏಕ ಪ್ರಕಾರವಾಗಿಲ್ಲ. ಇದಂತೂ ನಿಜ; ಯಾರೂ ಅವರನ್ನು ಕೃತ್ರಿಮದ ಹೆಂಗಸೆಂದು ಊಹಿಸಿಕೊಳ್ಳಲೂ ಸಾಧ್ಯವಿರುತ್ತಿರಲಿಲ್ಲ- ಅದೆಲ್ಲಾ ಇಂದಿನ ಅಮೃತಾನಂದ ಮಯೀ ಮಾತೆ ಮತ್ತು ಅಂಥವರಿಗೆ ಅನ್ವಯಿಸುವಂಥದು. ಈಗಿನ ಪ್ರಶ್ನೆ: ಪುಣ್ಯಾವತಮ್ಮನವರು (ಮತ್ತು ಅಂಥವರು) ಪಿತೃಪ್ರಧಾನ ಸಮಾಜದ ಕಟ್ಟಳೆಗಳೊಡನೆ ಹೇಗೆ ತಮ್ಮನ್ನು ತಾವು ತೂಗಿಕೊಂಡರು, ಅಂತಹ ಯಾವುದಾದರೂ ಸನ್ನಿವೇಶವನ್ನು ಧಿಕ್ಕರಿಸಲು ಅವರಿಗೆ ಆಧ್ಯಾತ್ಮವು ನೆರವಾಯಿತೆ, ಸಾಮಾಜಿಕ - ರಾಜಕೀಯ ಹಿನ್ನೆಲೆಯಲ್ಲಿ ಅವರನ್ನು ಅರ್ಥೈಸುವುದು ಹೇಗೆ ಇತ್ಯಾದಿ. ಈ ಪ್ರಶ್ನೆಗಳೆಲ್ಲಾ ಖಂಡಿತವಾಗಿಯೂ ಅವರಿಗೆ ಅರ್ಥವಾಗುತ್ತಿರಲಿಲ್ಲ. ಹಾಗೇನಾದರೂ ಪ್ರಶ್ನೆ ಕೇಳಿದ್ದರೆ ಕಣ್ಣು ಅಗಲಿಸಿ ನಕ್ಕುಬಿಡುತ್ತಿದ್ದರು. ದೀಪಾಮೆಹ್ತಾ ಚಿತ್ರಿಸುವ ಕಾಶಿಯ ವಿಧವೆಯರಲ್ಲಿ ಯಾರೂ ಈ ರೀತಿಯ ಆಧ್ಯಾತ್ಮಿಕ ಹಾದಿ ತುಳಿದವರಲ್ಲ. ಅವರಿಗೆ ಅದರ ಕಲ್ಪನೆಯೂ ಸಾಧ್ಯವಿರಲಿಲ್ಲ. ಅಂತಹ ಹಿಂಸೆ, ಕ್ರೌರ್ಯ, ಅಸಹಾಯಕತೆಗಳ ನಡುವೆ ಅವರಿಗೆ ಆಧ್ಯಾತಿಕತೆಯೂ ಒಂದು ಪೈಶಾಚಿಕ ಕರಿನೆರಳಾಗಿಯೇ ಕಂಡಿರುತ್ತಿತ್ತೇನೋ! ಇನ್ನೊಂದು ಸ್ವಾರಸ್ಯದ ಸಂಗತಿ ಇದೆ: ಅಮೃತಾನಂದ ಮಯೀ ಮಾತೆಯಂತೆ ಪೇಜಾವರದ ಚಿರಯುವಕ ಸ್ವಾಮಿಗಳು ಸಹ

ಆಧ್ಯಾತ್ಮದ ವಾಸನೆಯನ್ನು ಅನುಭವಿಸಿದವರಲ್ಲ. ಅವರಿಬ್ಬರಿಗೂ ಮಾನಸಿಕ ವ್ಯಾಪಾರಕ್ಕಿಂತಲೂ ಮಾರುಕಟ್ಟೆಯ ವ್ಯಾಪಾರ ಹತ್ತಿರವಾದದ್ದು.

(ಅ) ವಿಕ್ಷಿಪ್ತ ಮನಸ್ಸನ್ನು ನಿರ್ಮಲವನ್ನಾಗಿಸುವ ಆಶಯವನ್ನುಳ್ಳವ ರೆಲ್ಲರೂ ಒಂದರ್ಥದಲ್ಲಿ ಆಧ್ಯಾತ್ಮವಾದಿಗಳೇ ಆಗಿರುತ್ತಾರೆನ್ನಬಹುದು. ಆ ದೃಷ್ಟಿಯಿಂದ ನೋಡಿದಾಗ ಬೌದ್ಧರು ಆಧ್ಯಾತ್ಮ ವಿರೋಧಿಗಳಾಗಿಯೇ ಇರಬೇಕೆಂದು ಹೇಳಲಾಗುವುದಿಲ್ಲ. ಯಾತನೆಯನ್ನು ನಿವಾರಿಸುವ ಉದ್ದೇಶ ಬೌದ್ಧರಿಗಿದೆ, ಆದರೆ ಅವರು ಧ್ಯಾನ ಮತ್ತು ಸಮಾಧಿಗೆ ವಿಮುಖರಲ್ಲ. ಪಾಲಿಯಲ್ಲಿ ಧ್ಯಾನವನ್ನು "ಝಾನ" ಎನ್ನುತ್ತಾರೆ. ಅದು ಭಿಕ್ಖುಗಳಿಗೆ ಹಾಗೂ ಭಿಕ್ಖುಣಿಯರಿಗೆ ಸಮಾನವಾದುದು. ಈ ಮೊದಲು ನಾನು ಪುಣ್ಯಾವತಮ್ಮ ನವರ ಗುಣಗಳನ್ನು ಉಲ್ಲೇಖಿಸಿದೆ. ಆ ಗುಣಗಳಿಲ್ಲದವರಿಗೆ ಆಧ್ಯಾತ್ಮ ಸಿದ್ಧಿಸುವುದಿಲ್ಲವೆ? ಅಥವಾ, ಆಧ್ಯಾತ್ಮ ಸಿದ್ಧಿಸಿದಾಗ ಆ ಗುಣಗಳು ಅನಿವಾರ್ಯವಾಗಿ ಮೂಡಿಬರುತ್ತವೆಯೆ? ಆಧ್ಯಾತ್ಮಿಕತೆಯನ್ನು ರೂಢಿಸಿ ಕೊಂಡವರ "ರಾಜಕೀಯ" ಪ್ರಜ್ಞೆಯನ್ನು ತಿಳಿಯಲು ಇದು ಸಹಾಯ ಮಾಡಬಹುದು. ಬೆಂಗಳೂರು ರಾಮಕೃಷ್ಣಾಶ್ರಮದ ಸ್ವಾಮಿಗಳಿಗೆ ಆಧ್ಯಾತ್ಮ ಪ್ರಜ್ಞೆ ವಿಕಾಸವಾಗಿದೆಯೋ ಇಲ್ಲವೋ ಎಂಬ ಪ್ರಶ್ನೆ ಹಾಕಿಕೊಳ್ಳೋಣ: ರಾಮಕೃಷ್ಣ – ವಿವೇಕಾನಂದರಂತೆ ಇವರು ಪರಮತ ಸಹಿಷ್ಣುತೆ ಉಳ್ಳವರಲ್ಲ; ಆದ್ದರಿಂದ ಇವರಿಗೆ ಆಧ್ಯಾತ್ಮಿಕತೆಯ ಗಂಧವೇ ಇಲ್ಲವೆನ್ನುವುದು ಉಚಿತ ವಾದೀತೆ? ಅಲ್ಲವೆನ್ನುವುದಾದರೆ, ಆಧ್ಯಾತ್ಮಿಕತೆ ಮತ್ತು ಮಾನವೀಯತೆಗಳು ಸದಾ ಜೊತೆಜೊತೆಯಲ್ಲೇ ಇರಬೇಕಾಗಿಲ್ಲವೆಂದು ಭಾವಿಸಬೇಕಾಗುತ್ತದೆ. ಅಂದರೆ, ರಾಜಕೀಯವಾಗಿ ಕ್ಷುದ್ರ ವಿಚಾರಗಳನ್ನುಳ್ಳವರು ಸಹ ಆಧ್ಯಾತ್ಮದ ತುದಿಯನ್ನು ಮುಟ್ಟಬಹುದೆಂದರ್ಥ! ಇದು ಸರಿಯೇ? ಅದು ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಅನ್ವಯಿಸುವಂಥದು.

(ಇ) ಆಧ್ಯಾತ್ಮಿಕತೆಯು ಊಳಿಗಮಾನ್ಯ ವ್ಯವಸ್ಥೆಯಲ್ಲಿ ಹುಟ್ಟಿಕೊಂಡಿತು ಅಥವಾ ಊರ್ಜಿತವಾಗುತ್ತದೆ ಎಂಬುದಕ್ಕೆ ಚಾರಿತ್ರಿಕ ಪುರಾವೆಗಳು ಅಲಭ್ಯ. ಅದು ಊಳಿಗಮಾನ್ಯ ಪ್ರಭುತ್ವದ ಪೂರ್ವದಲ್ಲೂ ಇರಲು ಸಾಧ್ಯ. ಮತಧರ್ಮ ಗಳ ಉಗಮ ಮತ್ತು ವಿಕಾಸವೇ ಬೇರೆ, ಆಧ್ಯಾತ್ಮಿಕತೆಯೇ ಬೇರೆ. ಸಮೂಹದಲ್ಲಿ ಪ್ರಚಲಿತವಾಗುವುದು ಮತಧರ್ಮ, ವೈಯ್ಯಕ್ತಿಕ ಲಕ್ಷಣವಾಗಿ ಪ್ರಕಾಶಿಸುವುದು ಆಧ್ಯಾತ್ಮಿಕತೆ. ಮತಧರ್ಮದ ನೆಲೆಯಲ್ಲಿ ಪ್ರತಿಭಟನೆ ಇರುತ್ತದೆ. ಉದಾಹರಣೆಗೆ ಬುದ್ಧ, ಜೀಸಸ್, ನಾಮದೇವ, ಚೈತನ್ಯ ಮಹಾಪ್ರಭು, ಥಾಮಸ್ ಮುನ್‌ಝರ್ ಮುಂತಾದವರನ್ನು ನೋಡಬಹುದು. ಬೌದ್ಧರ ವಜ್ರಯಾನ ಮತ್ತು ಬೇರೆಯಂತೆ ತಾಂತ್ರಿಕ ವಿಧಾನಗಳು ಮಹಿಳೆಯರನ್ನು ಸರಕುಗಳನ್ನಾಗಿ ಬಳಸಿಕೊಂಡಿರುವುದುಂಟು. ಆಧ್ಯಾತ್ಮಿಕತೆಯು ಅಂತಹ ಹಾದಿಯನ್ನು ತುಳಿದಿಲ್ಲವೆಂದು ಭಾವಿಸುತ್ತೇನೆ. ಪೈಪೋಟಿಗೆ, ಜಿದ್ದಿಗೆ, ಪ್ರತಿಭಟನೆಗೆ ಅಥವಾ ರಾಜಕೀಯಕ್ಕೆ ಆಧ್ಯಾತ್ಮಿಕತೆಯು ಮೂಡುವುದಿಲ್ಲ. ಖೋಟಾ ಆಧ್ಯಾತ್ಮಿಕತೆಯನ್ನು ಆಧ್ಯಾತ್ಮಿಕತೆಯೆಂದು ಭ್ರಮಿಸಬಾರದು. ಅಕ್ಕಮಹಾದೇವಿಯಾಗಲಿ, ಥೆರೇಸಾ ಆಗಲಿ ಮತಧಾರ್ಮಿಕ ಚಳವಳಿಗಳಿಂದ ದೂರ ಸರಿದವರಲ್ಲ; ಹಾಗಿದ್ದುಕೊಂಡೇ ಆಧ್ಯಾತ್ಮದತ್ತಲೂ ಹೊರಳುವುದು ಅಸಾಧ್ಯವೇನಲ್ಲ.

(ಈ) ದೇವರು ನಮಗೆ ತಿಳಿದಿರುವ ಪ್ರಮುಖ ಮತಧರ್ಮಗಳಲ್ಲೆಲ್ಲಾ ಪುಲ್ಲಿಂಗದ ಪ್ರಭೃತಿಯೇ ಆಗಿರುವುದು ವಿಶೇಷ. ದೇವರುಗಳ ಹೆಂಡತಿಯರು ಬಹುಶಃ ಎರಡನೆಯ ಮಟ್ಟದ ದೇವರುಗಳಿರಬೇಕು. ಪುರುಷಪ್ರಧಾನ ಸಮಾಜಗಳಲ್ಲಿ ನೀತಿಯನ್ನು ಬೋಧಿಸುವ ದೇವರು ಪುರುಷನಾಗಿರುವುದು ಅಸಹಜವೇನಲ್ಲ. ಈ ಹಿನ್ನೆಲೆಯಲ್ಲಿ ಅರ್ಧನಾರೀಶ್ವರನನ್ನು ನೋಡಬೇಕು. ಮೊದಲಿಗೆ ಅರ್ಧನಾರೀ ವಿಷ್ಣು ಎಲ್ಲೂ ಇಲ್ಲ. ಎರಡನೆಯದಾಗಿ, ಅರ್ಧ ನಾರೀಶ್ವರನ ಕಲ್ಪನೆಯು ಪುರುಷ ಮತ್ತು ಸ್ತ್ರೀಯರ ಅವಿನಾಭಾವ ಸಂಬಂಧ ಮತ್ತು ಸಮಾನತೆಯನ್ನು ಸಾರಲು ಹುಟ್ಟಿಕೊಂಡಿರುವ ಕಲ್ಪನೆ ಎನಿಸುವುದಿಲ್ಲ. ಹಾಗಿದ್ದಿದ್ದರೆ ಅದನ್ನು ಸ್ಪಷ್ಟವಾಗಿ ಆಗಿಂದಾಗ್ಗೆ ಹೇಳುತ್ತಾ ಬರಲಾಗುತ್ತಿತ್ತು, ಆದರೆ ಹಾಗೆ ಆಗಿಲ್ಲ. ಮೂರನೆಯದಾಗಿ, ಸ್ತ್ರೀ–ಪುರುಷ ಸಮಾನತೆಯನ್ನು ಘೋಷಿಸುವ ಅರ್ಧನಾರೀಶ್ವರ ಇರುವೆಡೆ ಸ್ತ್ರೀ–ಪುರುಷರ ಪರಸ್ಪರ ಸಂಬಂಧ ಗಳಲ್ಲಿ ಒಮ್ಮೆಯಾದರೂ ಸಮಾನತೆಯ ಛಾಯೆ ಕಾಣಬರಬೇಕಾಗಿತ್ತು. ಅರ್ಧನಾರೀಶ್ವರನಿಲ್ಲದ ದೇಶಗಳ ಮಹಿಳೆಯರಿಗಿಂತಲೂ ನಮ್ಮ ದೇಶದ ಮಹಿಳೆಯರು ಇತಿಹಾಸದಲ್ಲಿ ಅಗಾಧವಾದ ಸಮಾನತೆಯನ್ನೇನೂ ಅನುಭವಿಸಿಲ್ಲ.

(ಉ) ಹೆಣ್ಣಿನ ಆಧ್ಯಾತಿಕತೆಯು ಒತ್ತಟ್ಟಿಗಿರಲಿ, ಆಕೆಯ ಸಂಸರ್ಗದಿಂದ ಪುರುಷನು ಸಹ ಆಧ್ಯಾತ್ಮಿಕತೆಯಿಂದ ವಂಚಿತನಾಗುತ್ತಾನೆಂಬ ಐತಿಹ್ಯ ನಮ್ಮ ದೇಶದ ನೂರಾರು ಋಷಿ–ಮುನಿಗಳ ಕತೆಗಳಲ್ಲಿ ದಾಖಲಾಗಿದೆ. ಎಲ್ಲ ಆಧ್ಯಾತ್ಮಿಕ ಋಷಿ–ಮುನಿಗಳೂ ಮಹಿಳೆಯನ್ನು ಆಧ್ಯಾತ್ಮದ ಹಾದಿಯಲ್ಲಿನ ಮುಳ್ಳೆಂದು ಜರೆದಿದ್ದಾರೆ. ಆದರೆ ಯಾರೂ ಅವಳಿಂದ ದೂರ ಓಡಿಹೋಗಿಲ್ಲ; ಅವಳೊಡನೆ ಜೀವನ ಸವಿದು ಆಮೇಲೆ ಮಾತ್ರವೇ ಅವಳನ್ನು ದೂಷಿಸಿದ್ದಾರೆ. ಇಂದಿನ ವ್ಯಾಪಾರೀಕರಣ ಸಂದರ್ಭದಲ್ಲಿ ನಡೆಯುತ್ತಿರುವುದೂ ಅದೇ.

(ಊ) ಆಧ್ಯಾತ್ಮಿಕತೆಯ ಜೊತೆಗೆ ತ್ಯಾಗ, ಅಪರಿಗ್ರಹ, ಪರದ ಚಿಂತನೆ, ಇವುಗಳನ್ನು ತಳುಕುಹಾಕುವುದು ರೂಢಿ. 'ಪರ' ಎಂಬುದಿದೆಯೆಂದು ಹೇಳುವವರಿಗೆ 'ಇಹ'ವು ಪೂರ್ವಧ್ರುವವಾಗಿ ಕಾಣುತ್ತದೆ. ಆಧ್ಯಾತ್ಮಿಕತೆಯ ಮುಖೇನ ಇಹದಿಂದ ಪಾರಾಗಿ ಪರವನ್ನು ಪ್ರವೇಶಿಸುವ ಸಾಧ್ಯತೆ ಯುಂಟೆಂದು ಆಧ್ಯಾತ್ಮಿಕತೆಯ ವಕ್ತಾರರು ಹೇಳುತ್ತಾರೆ. ಅದರ ಸಾಂಸ್ಕೃತಿಕ – ರಾಜಕೀಯ ಆಯಾಮಗಳೇನೆಂಬುದನ್ನು ಗುರುತಿಸಿಕೊಳ್ಳಬೇಕು. ಇಹದಿಂದ ಪಾರಾಗಲು ಪುರುಷನಿಗೆ ಸ್ತ್ರೀಯು ವರ್ಜ್ಯ, ಆದರೆ ಸ್ತ್ರೀಗೆ ಪುರುಷನು ವರ್ಜ್ಯವಲ್ಲ. ಇದಕ್ಕೆ ವಿವರಣೆ ಅನಗತ್ಯ. 'ಪರ' ಪಡೆದರೆಂಬ ಪ್ರತೀತಿಗೆ ಕಾರಣರಾದ ಪುರುಷರು ದೇಹ ಹಾಗೂ ಪ್ರಪಂಚದ ನಶ್ವರತೆಯನ್ನು ಸಾರುತ್ತಾರೆ. 'ಅಲ್ಲಿ ಇರುವುದು ನಮ್ಮ ಮನೆ' ಎನ್ನುತ್ತಲೇ ಇಲ್ಲಿಯ ಮನೆಯನ್ನು ಚೆನ್ನಾಗಿ ಭೋಗಿಸಿಬಿಡುತ್ತಾರೆ. 'ಪರ'ವನ್ನು ನಿರಾಕರಿಸಿಯೂ ಆಧ್ಯಾತ್ಮಿಕತೆ ಯನ್ನು ಅನುಭವಿಸಲು ಸಾಧ್ಯವೆನ್ನುವುದನ್ನು ಅವರು ನಂಬದಿದ್ದರೂ ಅಡ್ಡಿಯಿಲ್ಲ, ಅದರ ಸತ್ಯತೆಯು ಮುಕ್ಕಾಗುವುದಿಲ್ಲ.

(ಋ) ಸದ್ಯದ ವಸ್ತುಸ್ಥಿತಿ ಹೇಗಿದೆಯೆಂದರೆ ಕೆಲವು ಮಹಿಳೆಯರು ಚಿನ್ನದ ಆಭರಣಗಳನ್ನು ಹೇರಿಕೊಂಡು ಓಡಾಡುವಾಗ ಅವರಿಗೆ ಪ್ರಭುತ್ವವು ರಕ್ಷಣೆ ಒದಗಿಸುತ್ತದೆ. ಒದಗಿಸದಿದ್ದರೆ ಪೊಲೀಸರನ್ನು ಮೂದಲಿಸುವುದು ಇದ್ದೇ ಇದೆ. ಅದೇ ಹೆಂಗಸರು ನೂರಾರು ಜನ ಒಟ್ಟಾಗಿ ಸೇರಿ ತಮಗೆ ಅರ್ಥವಾಗಿಲ್ಲದ ಸೌಂದರ್ಯಲಹರಿಯನ್ನು ಪಠಿಸುತ್ತಾರೆ. ಅವರ 'ಆಧ್ಯಾತ್ಮಿಕತೆ' ಅಲ್ಲಿಗೆ ಸೀಮಿತವಾಗಿದೆ. ಅದರ ರಾಜಕೀಯ ನೆಲೆಯನ್ನು ಗುರುತಿಸುವುದು ಕಷ್ಟವಲ್ಲ.

(ೠ) ಬೌದ್ಧಿಕವಾಗಿ ಏನೆಲ್ಲಾ ಕಸರತ್ತು ಮಾಡಿದರೂ ಮಹಿಳೆಯ ನಿಜವಾದ ಬಿಡುಗಡೆಗೆ ಅದಷ್ಟೇ ಸಾಧನವಾಗುವುದಿಲ್ಲ. ಎಲ್ಲ ಬಿಡುಗಡೆಗಳೂ ಅಂದಂದಿನ ವ್ಯವಸ್ಥೆಯ ಗುಣಾತ್ಮಕ ಬದಲಾವಣೆಯಿಂದ ಸಾಧ್ಯವಾಗಿವೆ. ಅಕ್ಕನಾದರೂ ಅಷ್ಟೆ, ತಂಗಿಯಾದರೂ ಅಷ್ಟೆ; ಆಧ್ಯಾತ್ಮಿಕತೆಯು ವೈಯ್ಯಕ್ತಿಕ ಮಾನಸಿಕ ಅನುಭವವಾದ್ದರಿಂದ ಅದಷ್ಟರಿಂದಲೇ ಸಾಮೂಹಿಕ ಬಿಡುಗಡೆಯ ನೆಲೆ ಗಟ್ಟಿಗೊಳ್ಳುವುದಿಲ್ಲ. ಅದಕ್ಕಿರುವುದು ಒಂದೇ ಮಾರ್ಗ: ಸಂಘಟಿತ ಹೋರಾಟ. ಹೋರಾಟಕ್ಕಿಳಿದವರಿಗೆ ಆಧ್ಯಾತ್ಮಿಕತೆಯು ಅಪಥ್ಯವಲ್ಲ.

(ಎ) ನನ್ನ ಟಿಪ್ಪಣಿಗೂ ಮಾನ್ಯ ಪ್ರೊ॥ ಮನು ಚಕ್ರವರ್ತಿಯವರ ಪ್ರತಿಪಾದನೆಗೂ ಸಂಬಂಧವಿಲ್ಲದೆಯೂ ಇರಬಹುದು. ಅವರ ವಾದವನ್ನು ನಿರಾಕರಿಸುವುದು ನನ್ನ ಉದ್ದೇಶವಲ್ಲ. ಆದರೆ ಪ್ರಾಸಂಗಿಕವಾಗಿ ನಾನು ಹೇಳಿರುವ ವಿಚಾರಗಳು ಸಂಪೂರ್ಣವಾಗಿ ಅಬದ್ಧವಲ್ಲವೆಂದು ಭಾವಿಸುತ್ತೇನೆ.

❑

ಮಹಿಳೆಯರು ಮತ್ತು ಆಧ್ಯಾತ್ಮಿಕತೆ

ಪ್ರತಿಕ್ರಿಯೆ

# ಛದ್ಮವೇಷಗಳ ಅನಾವರಣ ಮತ್ತು ಹೊಸ ಆವರಣದ ಸೃಷ್ಟಿಯ ಕಡೆಗೆ

● *ಡಾ. ಆಶಾದೇವಿ*

**ಪ್ರೊ॥** ಮನು ಚಕ್ರವರ್ತಿಯವರ **"ಮಹಿಳೆಯರು ಮತ್ತು ಆಧ್ಯಾತ್ಮಿಕತೆ : ಸ್ಥಾನ ನಿರ್ದೇಶನ ರಾಜಕೀಯ ಕುರಿತ ಚಿಂತನೆಗಳು"** ಲೇಖನಕ್ಕೆ ಪ್ರತಿಕ್ರಿಯಿಸುವುದರಲ್ಲಿ ನನಗೆ ಅಪಾರ ಆಸಕ್ತಿ ಇದೆ. ಇದರ ಮೂಲ ಕಾರಣ ಭಾರತೀಯ ಸ್ತ್ರೀವಾದವು ಎದುರಿಸುತ್ತಿರುವ ಅಮೂರ್ತ ಸವಾಲುಗಳನ್ನು ಸೂಕ್ಷ್ಮ ವಿವರಗಳಲ್ಲಿ ಈ ಲೇಖನ ಮುಖಾಮುಖಿ ಯಾಗುತ್ತದೆ ಮತ್ತು ಈ ಮುಖಾಮುಖಿಯ ಪ್ರಕ್ರಿಯೆಯಲ್ಲಿಯೇ ಸ್ತ್ರೀವಾದವು ಹೊರಳಿಕೊಳ್ಳಬೇಕಾದ ತಿರುವುಗಳನ್ನು ಹುಡುಕುವು ದರಲ್ಲಿಯೂ ಮಗ್ನವಾಗಿದೆ ಎನ್ನುವುದು. ಎಂದರೆ ಸ್ತ್ರೀವಾದದ ಮುಂದಣ ಹೆಜ್ಜೆಗಳನ್ನು ಕುರಿತ ಹೊಳಹುಗಳೂ ಈ ಲೇಖನದಲ್ಲಿವೆ.

ಸ್ತ್ರೀವಾದಿ ತಾತ್ತ್ವಿಕತೆಯ ಬಗೆಗಿನ ಗಾಢವಾದ ಚಿಂತನೆಯ ಜೊತೆಗೆ ಇತರ ಕಲಾ ಪ್ರಕಾರಗಳ ಬಗೆಗಿನ ಸೂಕ್ಷ್ಮ ಒಳನೋಟಗಳೂ ಸೇರಿ ಭಾರತೀಯ ಹೆಣ್ಣಿನ ಸ್ಥಿತಿಗತಿಗಳನ್ನು ವಿಶ್ಲೇಷಿಸುವ ಅಧಿಕೃತ ಆವರಣ ವೊಂದು ಈ ಲೇಖನದಲ್ಲಿ ರೂಪುಗೊಂಡಿದೆ. ಆಧ್ಯಾತ್ಮವು ಈ ಲೇಖನದ ಕೇಂದ್ರವಾಗಿದ್ದರೂ ಅದರ ಆಚೆ ಈಚೆಗೂ ಚಲಿಸುತ್ತಾ ಲೇಖನವು ಸತತವಾಗಿ ಎಂಬಂತೆ ಹೆಣ್ಣು ಮತ್ತು ಸ್ತ್ರೀವಾದಿ ತಾತ್ತ್ವಿಕತೆಗಳು ಎದುರಿಸು ತ್ತಿರುವ ಸವಾಲುಗಳನ್ನು ಸಂಧಿಸುತ್ತದೆ.

ಆಧ್ಯಾತ್ಮಿಕತೆ ಮತ್ತು ಮಹಿಳೆಯ ನಡುವಿನ ಸಂಬಂಧದ ಚರ್ಚೆಯು ಹಲವೊಮ್ಮೆ ಉತ್ಪ್ರೇಕ್ಷಿತವಾದ, ಕೆಲವೊಮ್ಮೆ ಸಮಾನಾಂತರವಾಗಿರುವ ದೃಷ್ಟಿಕೋನಗಳ, ಗ್ರಹಿಕೆಗಳ ನಡುವೆ ಹೊಯ್ದಾಡುತ್ತಲೇ ಬಂದಿದೆ. ಈ ಗೋಜಲುಗಳನ್ನು ಬಿಡಿಸಿಕೊಳ್ಳುವ ಹೊಸ ದಾರಿಯ ಅನ್ವೇಷಣೆ ಯೊಂದರಲ್ಲಿ ಈ ಲೇಖನ ಕಾರ್ಯಪ್ರವೃತ್ತವಾಗಿದೆ.

ಈ ಲೇಖನ ಮೂರು ಮುಖ್ಯ ಅಂಶಗಳನ್ನು ಚರ್ಚಿಸುತ್ತದೆ ಎಂದು ನಾನು ತಿಳಿದಿದ್ದೇನೆ.

ಒಂದು, ಲಿಂಗರಾಜಕಾರಣದ **'ಛದ್ಮ ವೇಷಗಳು'** ಆಧ್ಯಾತ್ಮಿಕತೆಯ ಪರಿಕಲ್ಪನೆ ಮತ್ತು ಪರಿಭಾಷೆಯಲ್ಲಿ ಕಾರ್ಯ ನಿರ್ವಹಿಸುವ ವಿಭಿನ್ನ ಮಾದರಿಗಳ ಗುರುತಿಸುವಿಕೆ.

ಎರಡನೆಯದು, ಹೆಣ್ಣಿನ **'ದೇಹಮೂಲ ನಿರ್ವಚನೆ'** ಯು ಆಧ್ಯಾತ್ಮದ ನೆಲೆಯಲ್ಲಿಯೂ ಇನ್ನೂ ಹೆಚ್ಚು ಬಲಿಷ್ಠವಾಗುವ ವಿರೋಧಾಭಾಸದ ದುರಂತವನ್ನು ಅರ್ಥಮಾಡಿಕೊಳ್ಳಲು ನಡೆಸುವ ಪ್ರಯತ್ನಗಳು.

ಮೂರನೆಯದು, ಆಧ್ಯಾತ್ಮವು ಒದಗಿಸುವ space ಅನ್ನು ಪ್ರತಿರೋಧಿ ನೆಲೆಯಲ್ಲಿ ಬಳಸಿಕೊಂಡ ವಿವರಗಳನ್ನು ಗ್ರಹಿಸುವುದರ ಮೂಲಕ ಸ್ಥಾನ ನಿರ್ದೇಶನ ಮತ್ತು ಸಾಂಸ್ಕೃತಿಕ ರಾಜಕೀಯಕ್ಕೆ ಅವು ಒಡ್ಡಿದ ಸವಾಲುಗಳನ್ನು ಗುರುತಿಸುವುದು. ಮತ್ತು ಇದನ್ನು ಸಮಕಾಲೀನ ಸನ್ನಿವೇಶಕ್ಕೆ ಸಂವಾದಿಯಾಗಿಸಿಕೊಳ್ಳುವ ಮೂಲಕ ಸ್ತ್ರೀವಾದಿ ತಾತ್ತ್ವಿಕತೆಯಲ್ಲಿ ವಿಸ್ತರಿಸಿಕೊಳ್ಳುವ ಪ್ರಯತ್ನ.

ಸ್ತ್ರೀವಾದದ ಇತ್ತೀಚಿನ ಬಹುಮುಖ್ಯ ಬೆಳವಣಿಗೆಯೊಂದನ್ನು ಮನು ಅವರ ಈ ಲೇಖನ ಪ್ರತಿನಿಧಿಸುತ್ತಿದೆ. ಸಂಸ್ಕೃತಿ ಮತ್ತು ಪರಿಸರ ನಿಷ್ಠ ಚಿಂತನೆಗಳನ್ನು ಬೆಳೆಸುವ ಪ್ರಯತ್ನಗಳು ಈಗ ಎಲ್ಲೆಡೆ ನಡೆಯುತ್ತಿವೆ. ಸಾಂಸ್ಕೃತಿಕ ಸ್ತ್ರೀವಾದಕ್ಕೆ ಪೂರಕವಾಗಿ ನಡೆಯುತ್ತಿರುವ ಈ ಅಧ್ಯಯನಗಳು ಸ್ತ್ರೀವಾದವನ್ನು ವಿಶಿಷ್ಟ ಮತ್ತು ವರ್ಗೀಕೃತ ಅಧ್ಯಯನದಿಂದ 'ಸಮುದಾಯ ಅಧ್ಯಯನ'ವಾಗಿ ವಿಸ್ತರಿಸುವ ಆಶಯದವು. ಪಿತೃಪ್ರಧಾನ ವ್ಯವಸ್ಥೆ, ಲಿಂಗರಾಜಕಾರಣದ ಕಾರ್ಯ ಮಾದರಿಗಳು, ಶ್ರೇಣೀಕೃತ ವ್ಯವಸ್ಥೆಯ ಶಕ್ತಿ ಸಾಧ್ಯತೆಗಳು, ಧರ್ಮ ಮತ್ತು ಪ್ರಭುತ್ವದ ಪಾತ್ರ ಮತ್ತು ಹಸ್ತಕ್ಷೇಪ, ಬದಲಾದಂತೆ ಕಂಡರೂ ನಿಜದಲ್ಲಿ ಬದಲಾಗದ ಉತ್ಪಾದನಾ ಸಂಬಂಧಗಳ ಜಟಿಲತೆ ಈ ಎಲ್ಲವುಗಳ ಬಿಡಿಸಬರದ ಸಂಬಂಧಗಳ ಒಳಹೆಣಿಗೆಯಲ್ಲಿ ಹೆಣ್ಣು ಮತ್ತು ಸಮುದಾಯದ ಸಂಬಂಧವನ್ನು ಗುರುತಿಸುವ ಈ ಪ್ರಯತ್ನಗಳನ್ನು ಸ್ತ್ರೀವಾದಿ ಅಧ್ಯಯನಗಳೆಂದು ಅವಶ್ಯವಾಗಿ ಕರೆಯಬಹುದು. ಆದರೆ ಕೇವಲ ಸ್ತ್ರೀವಾದಿ ಅಧ್ಯಯನ ಗಳೆಂದು ಕರೆಯಲಾಗುವುದಿಲ್ಲ. ಮನು ಅವರ ಈ ಪ್ರಸ್ತುತ ಲೇಖನ ಇಂತಹ ಅಧ್ಯಯನದ ಉದಾಹರಣೆಯಾಗಿ ತೋರುತ್ತದೆ.

ಸ್ತ್ರೀವಾದದ ಎದುರಿಗೆ ಯಾವತ್ತೂ ಇರುವ ಬಹುಮುಖ್ಯ ಸವಾಲೆಂದರೆ ಲಿಂಗ ರಾಜಕಾರಣದ ಛದ್ಮವೇಷಗಳು. ಈ ಛದ್ಮವೇಷಗಳು ಸಮುದಾಯವನ್ನು ಅವುಗಳ ಅಪಾಯ ಅರಿವಿಗೇ ಬಾರದಂತೆ ಆವರಿಸುವ ಕ್ರಮಗಳನ್ನು ಶೋಧಿಸುವುದು ಅದೊಂದು ತುದಿಮೊದಲಿಲ್ಲದ ಶೋಧವೇ ಹೌದು. ಈ ಛದ್ಮವೇಷಗಳು ಆಪ್ಯಾಯಮಾನವಾದ ರೂಪಗಳಲ್ಲಿ ಕಾಣಿಸಿಕೊಳ್ಳುವ ಮೂಲಕವೇ ಪಿತೃಪ್ರಧಾನ ವ್ಯವಸ್ಥೆಯನ್ನು ಬಲಪಡಿಸುತ್ತ ಹೋಗುತ್ತವೆ. ಈ ಕ್ರಿಯೆಯಲ್ಲಿ ಹೆಣ್ಣನ್ನು ಅವಳ ಇಚ್ಛಾಶಕ್ತಿಯ ಬಲದಿಂದಲೇ ಎಂಬಂತೆ ವಿಜೃಂಭಣೆಯಿಂದ ಬಳಸ ಲಾಗುತ್ತದೆ. ಹೆಣ್ಣಿನ ಬಿಡುಗಡೆಯ ದಾರಿಗಳಲ್ಲೊಂದು ಎನ್ನುವ ಹಾಗೆ ಪ್ರತಿಪಾದಿಸಲ್ಪಟ್ಟ ಆಧ್ಯಾತ್ಮವು ವಾಸ್ತವದಲ್ಲಿ ಅವಳ ಆಯ್ಕೆಯ ಎಲ್ಲಾ ಅವಕಾಶಗಳನ್ನೂ ನಾಶಮಾಡುವ 'ಸಾಂಸ್ಕೃತಿಕ ಕಟ್ಟೋಣ' ಮಾತ್ರ ವಾಗಿರುತ್ತದೆ. ಇದನ್ನು ಹೆಣ್ಣಿನ ಅಸ್ಮಿತೆಯ ರೂಪದಲ್ಲಿ ಪ್ರತಿಪಾದಿಸುವು ದಂತೂ ವ್ಯಂಗ್ಯ ಮತ್ತು ದುರಂತದ ಪರಾಕಾಷ್ಠೆ. ತಮ್ಮ ಈ ವಾದವನ್ನು ದೇವಿ ಮತ್ತು ಸ್ತನದಾಯಿ ಕಲಾಕೃತಿಗಳ ವಿಶ್ಲೇಷಣೆಯ ಮೂಲಕ ಶಕ್ತವಾಗಿ ಮಂಡಿಸಿದ್ದಾರೆ.

ಮನು ಅವರು ಪ್ರತಿಪಾದಿಸುವ ಎರಡನೆಯ ಅಂಶವು ವ್ಯವಸ್ಥೆಯು ಹೆಣ್ಣನ್ನು ನಿರ್ವಚಿಸಲು ಯಾವಾಗಲೂ ಹುಡುಕುವುದು ದೇಹಮೂಲ ಸಾಧ್ಯತೆಗಳನ್ನೆ. ದೇಹ ಮತ್ತು ಐಹಿಕತೆಗಳನ್ನು ಮೀರುವ ಘೋಷಿತ ಆಶಯದ ಆಧ್ಯಾತ್ಮವೂ ಕೂಡ ಹೆಣ್ಣಿನ ಮಟ್ಟಿಗೆ ಸಂಬಂಧಕಟ್ಟಿಕೊಳ್ಳುವುದು ದೇಹದ ಮೂಲಕವೆ. ದೇಹಮೂಲ ನಿರ್ವಚನಗಳ ರೂಪಾಂತರ ಶಕ್ತಿಯಂತೂ ಅಸಾಧಾರಣವಾದುದು. ಅನೂಹ್ಯವಾದ ಆಮಿಷಗಳಲ್ಲಿ ಹೆಣ್ಣನ್ನು ದೇಹಮೂಲ ನಿರ್ವಚನಗಳಿಗೆ ಇದು ಒತ್ತಾಯಿಸುತ್ತದೆ.

ಚೈತನ್ಯದ ನೆಲೆಯಲ್ಲಿಯೂ ಹೆಣ್ಣನ್ನು ತನ್ನ ಕರಾರುಗಳ ಪೂರೈಕೆಗಾಗಿ ವ್ಯವಸ್ಥೆಯು ಅಪಾರ ದಕ್ಷತೆಯಲ್ಲಿ ಬಳಸಿಕೊಳ್ಳುತ್ತದೆ.

ಈ ಎರಡು ಅಂಶಗಳನ್ನು ಮನು ಅವರು ಸ್ಪಷ್ಟಪಡಿಸಿಕೊಳ್ಳುವುದು ತಮ್ಮ ಪ್ರಮೇಯವನ್ನು ಮಂಡಿಸುವುದಕ್ಕೆ ಭೂಮಿಕೆಯಾಗಿ. ಇಂತಹ ಇಕ್ಕಟ್ಟು ಮತ್ತು ಬಿಕ್ಕಟ್ಟುಗಳ ನಡುವೆಯೂ ಆಧ್ಯಾತ್ಮವು ಸಾಧ್ಯವಾಗಿಸುವ space ಅನ್ನು (ಆವರಣ ?) ಬಳಸಿಕೊಂಡ ಮತ್ತು ಬಳಸಿಕೊಳ್ಳ ಬೇಕಾದ ಅವಶ್ಯಕತೆಯನ್ನು ಪ್ರತಿಪಾದಿಸುವುದಕ್ಕಾಗಿ. ಮನು ಅವರು ಇದನ್ನು ಸ್ವ ವಿಮರ್ಶೆಯ ಘಟಕ ಮತ್ತು ವಿರೋಧವು ಪ್ರತಿರೋಧವಾಗಿ ಬೆಳೆಯುವ ಪ್ರಕ್ರಿಯೆಯಲ್ಲಿ ಗುರುತಿಸುತ್ತಾರೆ. ಅಕ್ಕಮಹಾದೇವಿಯ ಚನ್ನಮಲ್ಲಿಕಾರ್ಜುನ ಮತ್ತು ಅರ್ಧನಾರೀಶ್ವರ ಪರಿಕಲ್ಪನೆಗಳನ್ನು ತಮ್ಮ ಪ್ರಮೇಯಕ್ಕೆ ಸಮರ್ಥನೆಗಳಾಗಿ ಮನು ಬಳಸುತ್ತಾರೆ (ಅಕ್ಕ ಮಹಾದೇವಿಯ ಜೊತೆಗೆ ಇನ್ನೂ ಅನೇಕ ವಚನಕಾರ್ತಿಯರಲ್ಲಿ ಆಧ್ಯಾತ್ಮವು ಪ್ರತಿರೋಧವಾಗಿಯೇ ಬಳಕೆಯಾಗಿರುವುದನ್ನು ನಾವು ಗಮನಿಸಬಹುದು. ಹೆಣ್ತನ ಮತ್ತು ದೇಹಗಳನ್ನು ಧಿಕ್ಕರಿಸುವ ಆಶಯದ ಅನೇಕ ವಚನಗಳು ಆಧ್ಯಾತ್ಮವನ್ನು, ಐಹಿಕವನ್ನು ಮೀರುವ ಆಶಯಕ್ಕೆ ವಿರುದ್ಧವಾಗಿ ವ್ಯವಸ್ಥೆ ಕೊಡಮಾಡಿರುವ ಅಧೀನ ವ್ಯಕ್ತಿತ್ವವನ್ನು ನಿರಾಕರಿಸಿ ಪ್ರತಿರೋಧವಾಗಿ ಆಧ್ಯಾತ್ಮವನ್ನು ಅಪ್ಪುವ, ಒಪ್ಪುವ ನಿಲುವುಗಳಾಗಿಯೇ ಕಾಣಿಸುತ್ತವೆ).

ಆಧ್ಯಾತ್ಮದ ಸಾಂಸ್ಕೃತಿಕ ಕಟ್ಟೋಣವನ್ನು ಒಡೆಯಲು ಈ ಬಗ್ಗೆಯ ಪ್ರತಿರೋಧಿ ನಿಲುವುಗಳು ಪ್ರಯತ್ನಿಸುತ್ತವೆ. ಆಧ್ಯಾತ್ಮವನ್ನು ಒಪ್ಪುವ ಅಥವಾ ನಿರಾಕರಿಸುವ ನಿಲುವುಗಳಿಗಿಂತ ಈ ಬಗೆಯ ಪ್ರಯತ್ನಗಳು ಸಮಕಾಲಿನ ಸಂದರ್ಭದ ಹೆಣ್ಣಿನ ಸವಾಲುಗಳನ್ನು ಮುಖಾಮುಖಿ ಯಾಗುವುದಕ್ಕೂ ನೆರವಾಗುತ್ತವೆ ಎನ್ನುವ ಮನು ಅವರ ದೃಷ್ಟಿಕೋನದ ಜೊತೆಗೆ ನನ್ನ ಸಹಮತವಿದೆ.

ಅಸ್ಪಷ್ಟವಾಗಿದ್ದ ಕೆಲವು ಸಂಗತಿಗಳನ್ನು ಸ್ಪಷ್ಟಪಡಿಸುತ್ತಿರುವ ಬಹು ಮುಖ್ಯ ಲೇಖನ ಒಂದನ್ನು ನಮಗೆ ಕೊಟ್ಟದ್ದಕ್ಕಾಗಿ ಮನು ಅವರನ್ನು ನಾನು ಅಭಿನಂದಿಸುತ್ತೇನೆ. ❑

---

**ಜು**ಲೈ ಮಾಸದ ಪತ್ರಿಕೆಯಲ್ಲಿ "ಜೊತೆಗುಳಿಯುವುದು ರಂಗ ಕರ್ಮ ಮಾತ್ರ" ಲೇಖನವು ತುಂಬಾ ಮೆಚ್ಚುಗೆಯಾಯಿತು. ಬಿ. ಜಯಶ್ರೀಯವರಿಗೆ ಸಾಟಿ ಬಿ. ಜಯಶ್ರೀಯವರೆ ಹೊರತು ಬೇರೆ ಯಾರೂ ಇಲ್ಲ. ನಮ್ಮ ಮುಂದೆ ಈಗಿರುವ ಯಶೋಗಾಥೆಯ ಮಹಿಳಾ ಸಾಧಕಿಯರನ್ನು ಪರಿಚಯಿಸ ಬೇಕೆಂದು ಕೋರಿಕೆ (1970ರಿಂದ ಇತ್ತೀಚೆಗೆ) ಅದಕ್ಕಿಂತ ಹಿಂದಿನವರ ಬಗ್ಗೆ ಆತ್ಮಚರಿತ್ರೆ ಪುಸ್ತಕಗಳು ಬೇಕಾದಷ್ಟು ಬಂದಿವೆ. ಪ್ರತಿಕ್ರಿಯೆಗಾಗಿ ಒಂದು ಪುಟ ಮೀಸಲಿಡುವುದು ಸೂಕ್ತ ವೆನಿಸುತ್ತದೆ.

ನಿಮ್ಮ ಪತ್ರಿಕೆಯ ಅಭಿಮಾನಿ.
**ಲಲಿತಾ ಅಂಬಾಗಿಲು**

---




**ರೀ**ಫಿಲ್ಲಿನ ಕೊನೆಯನ್ನು ಅಗೆದು ಶಬ್ದವನ್ನಲ್ಲಿ ಹುಗಿದಿಟ್ಟೆ
ಬಿಸಿಲಲ್ಲಿ ಅದನ್ನು ಹಿಡಿದು ನಿಂತೆ
ಶಾಹಿ ಕರಗಿ ನನ್ನ ಕಣ್ಣುಗಳಲ್ಲಿ ಹರಡಿತು
ಕಪ್ಪು ಕಲೆಗಳಿಂದ ತುಂಬಿ ಹೋದ ಕಣ್ಣುಗಳು
ರೀಫಿಲ್ಲಿನ ಕೊನೆಯನ್ನೇ ದಿಟ್ಟಿಸಿ ನೋಡಿತು

ಕೊನೆಯಿಂದ ಚಿಗುರಿದ ಚಿಗುರುಗಳನ್ನು
ಕಾಗದದಮೇಲೆ ಹರಡುವುದಕ್ಕೆ ಮೊದಲೇ
ಕಾಗದವನ್ನು ಹರಿದು ಆ ಚಿಗುರುಗಳು
ಟೇಬಲ್ಲಿನಮೇಲೆ ಬೇರುಬಿಟ್ಟು
ಕಾಡ ಗಿಡದ ಹಾಗೆ ಹರಡಿ,
ನನಗೂ ಸುತ್ತಿಕೊಂಡಿತು.

ಕಪ್ಪು ಕಲೆಗಳ ಹಿಂದಿಂದ
ಕಾಣುತ್ತಿದ್ದ ಈ ದೃಶ್ಯವನ್ನು ನೋಡಿ,
ಕೊಡಲಿಯಿಂದ ಕಾಗದ, ಪೆನ್, ಟೇಬಲ್, ಕುರ್ಚಿ
ಎಲ್ಲವನ್ನೂ ಸಿಗಿದು ಹಾಕಿದೆ. ಆದರೂ
ನಾಲ್ಕುಕಡೆಯಿಂದಲೂ ಆವರಿಸಿಕೊಂಡ ಕೊಂಬೆಗಳಲ್ಲಿ
ಸಿಕ್ಕ ನನಗೆ ಉಸಿರುಗಟ್ಟಿತು.

ಕಡೆಯಲ್ಲಿ ನಾನು ನನ್ನೆಲ್ಲ ಶಕ್ತಿಯನ್ನೂ ಹಾಕಿ
ಸೂರ್ಯನೆದುರು ನಿಂತು ರೀಫಿಲ್ಲಿನಲ್ಲಿ
ಅಗೆದು ಹುಗಿದಿಟ್ಟ ಶಬ್ದವನ್ನು ಕಿತ್ತೆಸೆದೆ
ಈಗ, ಕಣ್ಣುಗಳಲ್ಲಿದ್ದ ಕಪ್ಪು ಕಲೆಯನ್ನು
ಹೇಗೆ ತೊಡೆದು ಹಾಕುವುದೆಂದು ಯೋಚಿಸುತ್ತಿದ್ದೇನೆ.

ಗುಜರಾತಿ ಮೂಲ : **ದರ್ಶಿನಿ ದಾದಾವಾಲ**
ಕನ್ನಡಕ್ಕೆ : **ಮಮತ. ಜಿ. ಸಾಗರ**

# ಮಹಿಳೆಯರು - ಸಾಮಾಜಿಕ ಪಿಡುಗುಗಳು - ಸಾಂಸ್ಕೃತಿಕ ಪರಿಹಾರಗಳು

● *ಮ. ಶ್ರೀ ಮುರುಳಿ ಕೃಷ್ಣ*

ಒಂದೂವರೆ ವರ್ಷದ ಹಿಂದೆ ಮಾಧವಿಯ ವಿವಾಹ 'ಧಾಂ ಧೂಂ' ಎಂದು ಜರುಗಿತು. ಮಧ್ಯಮ ವರ್ಗದ ಅವಳ ಕುಟುಂಬ ವಿವಾಹಕ್ಕಾಗಿ ಸಾಲ ಮಾಡಬೇಕಾಯಿತು. ಈಗ ಹಣಕಾಸಿನ ತೀವ್ರ ಮುಗ್ಗಟ್ಟಿನಿಂದ ಪರದಾಡಬೇಕಾದ ಪರಿಸ್ಥಿತಿ. ಗಾಯದ ಮೇಲೆ ಬರೆ ಎಳೆದಂತಾಯಿತು ಮಾಧವಿ ತಿಳಿಸಿದ ಸುದ್ದಿ. ಅವಳು ಹೆಣ್ಣು ಮಗುವಿನ ತಾಯಿಯಾಗುತ್ತಾಳೆಂದು ತಿಳಿದು ಅವಳ ಅತ್ತೆ ಹಾಗೂ ಗಂಡ ಅಬಾರ್ಷನ್ ಮಾಡಿಸಿಕೊಳ್ಳುವಂತೆ ಒತ್ತಡ ಹೇರುತ್ತಿದ್ದಾರೆಂಬ ವಿಷಯ ಅರಿತ ಅವಳ ತಂದೆ-ತಾಯಿ ಶೋಕಸಾಗರದಲ್ಲಿ ಮುಳುಗಿದರು. ಇದು ಇಪ್ಪತ್ತೊಂದನೆಯ ಶತಮಾನದಲ್ಲಿ ಭಾರತದ ಯಾವುದೇ ಗ್ರಾಮ, ಪಟ್ಟಣ ಅಥವಾ ಮಹಾನಗರಗಳಲ್ಲಿ ಜರುಗಬಹುದಾದ ಒಂದು ವಿಷಾದನೀಯ ಘಟನೆ.

ಒಂದು ವರದಿಯ ಪ್ರಕಾರ, ಅಲ್ಟ್ರಾಸೌಂಡ್ ಸಾಧನಗಳು ಬಳಕೆಗೆ ಬಂದ ಇಪ್ಪತ್ತು ವರ್ಷಗಳಲ್ಲಿ ಸುಮಾರು 10 ಮಿಲಿಯ ಹೆಣ್ಣು ಭ್ರೂಣ ಹತ್ಯೆಗಳು ಜರುಗಿವೆ. ಪ್ರತಿ 34 ನಿಮಿಷಗಳಲ್ಲಿ ಒಂದು ರೇಪ್ (ಅತ್ಯಾಚಾರ) ಜರುಗುತ್ತದೆ. ಹಾಗೆಯೇ ಪ್ರತಿ 93 ನಿಮಿಷಗಳಿಗೊಮ್ಮೆ ಒಬ್ಬ ಮಹಿಳೆ ಕೊನೆಯುಸಿರೆಳೆಯುತ್ತಾಳೆ. ಇದು ಭಾರತದ ಒಂದು ಚಿತ್ರಣ.

ಇನ್ನು ವಿಶ್ವದ ಕೆಲವು ಇತರ ದೇಶಗಳತ್ತ ಗಮನ ಹರಿಸೋಣ.

**ಏಷ್ಯಾಖಂಡ**

**ಬಾಂಗ್ಲಾದೇಶ** : ಸುಮಾರು ಅರ್ಧದಷ್ಟು ಹೆಣ್ಣು ಮಕ್ಕಳು 15 ವರ್ಷ ತಲುಪುವ ಸಂದರ್ಭದಲ್ಲೇ ಮದುವಣಗಿತ್ತಿಯಾಗಿ ಬಿಡುತ್ತಾರೆ. 19 ವರ್ಷಕ್ಕೆ ಸುಮಾರು ಶೇಕಡ 60ರಷ್ಟು ಹೆಣ್ಣು ಮಕ್ಕಳು ತಾಯಿಯಾಗುತ್ತಾರೆ.

**ಕಾಂಬೋಡಿಯ** : ಇಲ್ಲಿ ಸುಮಾರು 55,000 ವೇಶ್ಯೆಯರಿದ್ದಾರೆ ಅವರಲ್ಲಿ 1/3 ಭಾಗ 18 ವರ್ಷಗಳ ಒಳಗಿದ್ದಾರೆ.

**ಥಾಯ್‌ಲ್ಯಾಂಡ್** : ಆರ್ಥಿಕತೆಯ ಸುಮಾರು 1/3 ಭಾಗ ಅವಲಂಬಿತ ವಾಗಿರುವುದು ವೇಶ್ಯಾವೃತ್ತಿಯ ಮೇಲೆ. ಇಲ್ಲಿ ಸುಮಾರು 2.8 ಮಿಲಿಯ ವೇಶ್ಯೆಯರಿದ್ದಾರೆ.

**ಸೌತ್ ಕೊರಿಯಾ** : 20 ವರ್ಷ ವಯೋಮಾನದ ಹೆಣ್ಣುಮಕ್ಕಳಲ್ಲಿ ಸುಮಾರು ಶೇಕಡ 50ರಷ್ಟು ಮಂದಿ ಕಾಸ್ಮೆಟಿಕ್ ಶಸ್ತ್ರಚಿಕಿತ್ಸೆಗೆ ಒಳಗಾಗಿದ್ದಾರೆ.

**ಜಪಾನ್ ಮತ್ತು ಹಾಂಗ್‌ಕಾಂಗ್** : ಮಹಿಳೆಯರ ಜೀವನದ ಅವಧಿ ಸುಮಾರು 85 ವರ್ಷಗಳು. ಪ್ರಪಂಚದಲ್ಲೇ ಇದು ಅತ್ಯಂತ ಹೆಚ್ಚು.

**ಯುರೋಪ್**

**ಜರ್ಮನಿ** : ಇಲ್ಲಿ ಉದ್ಯೋಗಸ್ಥ ಮಹಿಳೆಯರು ಪುರುಷರಿಗಿಂತ ಸುಮಾರು ಶೇಕಡ 24ರಷ್ಟು ಕಡಿಮೆ ಸಂಪಾದಿಸುತ್ತಾರೆ.

**ಸ್ವೀಡನ್** : ನವಜಾತ ಶಿಶುಗಳ ತಂದೆ-ತಾಯಿಗಳಿಗೆ 16 ತಿಂಗಳುಗಳ ರಜೆ ದೊರೆಯುತ್ತದೆ.

**ಫಿನ್‌ಲ್ಯಾಂಡ್** : ಶೇಕಡ 58ರಷ್ಟು ಮಹಿಳೆಯರು ಸಚಿವ ಸ್ಥಾನಗಳನ್ನು ಅಲಂಕರಿಸಿದ್ದಾರೆ. ವಿಶ್ವದಲ್ಲೇ ಇದು ಅತಿ ಹೆಚ್ಚಿನ ಅನುಪಾತ.

**ಡೆನ್ಮಾರ್ಕ್ ಮತ್ತು ಸ್ವೀಡನ್** : ಯುರೋಪ್‌ನಲ್ಲೇ ಅತಿ ಹೆಚ್ಚಿನ ಮಹಿಳಾ ಉದ್ಯೋಗದ ದರ ಇರುವ ದೇಶಗಳು (ಶೇಕಡ 73.3)

**ಉತ್ತರ ಅಮೇರಿಕ ಯುಎಸ್‌ಎ** : ಅ) 1980ರಿಂದ ಜರುಗಿರುವ ಪ್ರತಿ ಅಧ್ಯಕ್ಷೀಯ ಚುನಾವಣೆಯಲ್ಲಿ ಹೆಚ್ಚೆಚ್ಚು ಪುರುಷರಿಗಿಂತ ಮಹಿಳೆಯರು ಮತದಾನ ಮಾಡಿದ್ದಾರೆ. ಆ) 20 ವರ್ಷ ತಲುಪುವುದರ ಮುನ್ನವೇ ಶೇಕಡ 30ರಷ್ಟು ಅಮೇರಿಕೆಯ ಹುಡುಗಿಯರು ಗರ್ಭವತಿಯಾಗುತ್ತಾರೆ.

**ಆಫ್ಘಾನಿಸ್ತಾನ** : 15 ವರ್ಷಗಳ ಮೇಲಿನ ಮಹಿಳೆಯರಲ್ಲಿ ಅಕ್ಷರಸ್ಥರಾಗಿರುವುದು ಕೇವಲ ಶೇಕಡ 12.6ರಷ್ಟು

**ರಷ್ಯಾ** : ಪ್ರತಿಗಂಟೆಗೆ ಕನಿಷ್ಠ ಒಬ್ಬ ಮಹಿಳೆ ಕೌಟುಂಬಿಕ ಹಿಂಸೆಯಿಂದ ಪ್ರಾಣ ಕಳೆದುಕೊಳ್ಳುತ್ತಾಳೆ. ಪ್ರತಿವರ್ಷ ಸುಮಾರು 14,000 ಮಹಿಳೆಯರು ಕೊಲ್ಲಲ್ಪಡುತ್ತಾರೆ.

**ಆಫ್ರಿಕಾ**

**ಮಲಾವಿ** : 13 ಮಿಲಿಯ ಜನಸಂಖ್ಯೆಯಿರುವ ಈ ಪುಟ್ಟ ದೇಶದಲ್ಲಿ ಸುಮಾರು 6 ಲಕ್ಷ ಮಹಿಳೆಯರು ಹೆಚ್‌ಐವಿ ಯಿಂದ ಬಾಧಿತರಾಗಿದ್ದಾರೆ.

**ಕಾಂಗೊ** : 2008ರ ಮೊದಲ ಆರುತಿಂಗಳಲ್ಲಿ 3500ಕ್ಕಿಂತಲೂ ಹೆಚ್ಚು ರೇಪ್ (ಅತ್ಯಾಚಾರ)ಗಳು ಜರುಗಿರುವುದು ವರದಿಯಾಗಿದೆ.

ಈ ಅಂಕಿ-ಅಂಶಗಳು ಅನೇಕ ಕಥೆಗಳನ್ನು ಸಾರುತ್ತವೆ. ಪ್ರಪಂಚದಾದ್ಯಂತ ಇರುವ ಅಸಮಾನತೆ ಜನತೆಯ ಮೇಲೆ ಹತ್ತು ಹಲವು ಭೀಕರ ಪರಿಣಾಮಗಳನ್ನು ಬೀರುತ್ತದೆ. ಇವುಗಳಿಗೆ ಪುರುಷರು, ಮಹಿಳೆಯರು ಮತ್ತು ಮಕ್ಕಳು ಈಡಾಗುವುದು ನಿಜ. ಆದರೆ ಇವುಗಳಿಂದ ಹೆಚ್ಚಾಗಿ ನರಳುವವರು ಮಹಿಳೆಯರು ಮತ್ತು ಮಕ್ಕಳು ಎಂದು ನಿಸ್ಸಂದೇಹವಾಗಿ ಹೇಳಬಹುದು. ಮುಂದುವರೆದ ರಾಷ್ಟ್ರಗಳಲ್ಲಿ ಹಲವು ದಶಕಗಳ ಕಲಾವಧಿಯಲ್ಲಿ ಮಹಿಳೆಯರ ಸ್ಥಾನಮಾನಗಳಲ್ಲಿ ಬದಲಾವಣೆಗಳಾಗಿರುವುದು ಸತ್ಯವಾದರೂ, ಅಲ್ಲೂ ತಾರತಮ್ಯಗಳಿರುವುದು ಮೇಲಿನ ಅಂಕಿ-ಸಂಖ್ಯೆಗಳಿಂದ ವೇದ್ಯವಾಗುವ ಸಂಗತಿ. ಆದರೆ ಬಡ ಮತ್ತು ಅಭಿವೃದ್ಧಿಶೀಲ ದೇಶಗಳಲ್ಲಿ ಮಹಿಳೆಯರ ಸ್ಥಿತಿಗತಿಗಳಲ್ಲಿ ಹೆಚ್ಚಿನ ಮಟ್ಟದ ಸುಧಾರಣೆಗಳಾಗಬೇಕಾಗಿದೆ.

ಹೆಣ್ಣು ಭ್ರೂಣಹತ್ಯೆ, ಮಹಿಳೆಯರು ಮತ್ತು ಹೆಣ್ಣು ಮಕ್ಕಳ ಮೇಲೆ ಹಿಂಸೆ ಮುಂತಾದ ಸಾಮಾಜಿಕ ಪಿಡುಗುಗಳನ್ನು ಶಮನಗೊಳಿಸುವ ದಿಶೆಯಲ್ಲಿ "ಸಾಂಸ್ಕೃತಿಕ ರಾಜಕೀಯ"ದ ಪಾತ್ರ ಗಮನೀಯ. ಪುರೋಗಾಮಿ ಸಂಘಟನೆಗಳು, ಸಂಸ್ಥೆಗಳು, ಗುಂಪುಗಳು ಮತ್ತು ವ್ಯಕ್ತಿಗಳ ಜೊತೆಗೆ ಸಾಂಸ್ಕೃತಿಕ ಕ್ಷೇತ್ರದ ಕ್ರಿಯಾಶೀಲರು ಮತ್ತು ಧಾರ್ಮಿಕ ನಾಯಕರು ಈ ರಾಜಕೀಯದಲ್ಲಿ ಸಕ್ರಿಯವಾಗಬೇಕು. ಪದ್ಧತಿಗಳು, ಆಚರಣೆಗಳು ಮುಂತಾದುವು ಈ ಸಾಮಾಜಿಕ ಪಿಡುಗುಗಳಿಗೆ ಸಾಂಸ್ಕೃತಿಕ ಆಯಾಮವನ್ನು ನೀಡುತ್ತವೆ. ಸಮುದಾಯಗಳು ತಲತಲಾಂತರಗಳಿಂದ ಇಂಥಾ ಅನಿಷ್ಟಕಾರಿ ಪಿಡುಗುಗಳನ್ನು ಸಂಸ್ಕೃತಿಯ ಹೆಸರಿನಲ್ಲಿ ಮುಂದುವರಿಸುತ್ತ ಬಂದಿರುವುದನ್ನು ಕಾಣಬಹುದು. ಆದುದರಿಂದ ಅವುಗಳನ್ನು ತಡೆಗಟ್ಟಲು ಸೂಕ್ತವಾದ ಸಾಂಸ್ಕೃತಿಕ ಸ್ಪಂದನವಿರಬೇಕು. ಆ ಸ್ಪಂದನ ಸೂಕ್ಷ್ಮವಾಗಿರುವುದರ ಜೊತೆಗೆ ಸ್ಥಳೀಯ ಬದಲಾವಣೆಗಳ ಹರಿಕಾರರನ್ನು ಒಳಗೊಂಡಿರಬೇಕು. ಉದಾಹರಣೆಗಾಗಿ ಮಠಾಧೀಶರ ಪಾತ್ರವನ್ನು ಉಲ್ಲೇಖಿಸಬಹುದು. ಈ ವಿಷಯದಲ್ಲಿ ಅವರು ಪರಿಣಾಮಕಾರಿಯಾದ, ಸಕಾರಾತ್ಮಕ ಪಾತ್ರವನ್ನು ವಹಿಸಬಲ್ಲರು. ಸಾಮಾನ್ಯವಾಗಿ ಒಂದು ಜನಪ್ರಿಯ ಮಠಕ್ಕೆ ಅಪಾರ ಅನುಯಾಯಿಗಳಿರುತ್ತಾರೆ. ಅಂಥ ಮಠದ ಸ್ವಾಮೀಜಿ ಪುರೋಗಾಮಿಯಾಗಿದ್ದರೆ, ಸಾಮಾಜಿಕ ಪಿಡುಗುಗಳ ವಿರುದ್ಧ ಅದರ ಕರೆಗಳಿಗೆ ಸ್ಪಂದಿಸುವ ಭಕ್ತರು ಅಧಿಕ ಸಂಖ್ಯೆಯಲ್ಲಿರುತ್ತಾರೆ. ನಮ್ಮಲ್ಲಿರುವ ಕೆಲವು ಮಠಾಧೀಶರು ಈ ಕಾರ್ಯದಲ್ಲಿ ತೊಡಗಿದ್ದಾರೆ. ಮಹಾರಾಷ್ಟ್ರದ ಮಾಲೇಗಾಂವ್‌ನ ಮುಸಲ್ಮಾನರು ಬಹುಸಂಖ್ಯಾತರಾಗಿರುವ ಪ್ರದೇಶದಲ್ಲಿ ಆ ಧರ್ಮದ ನಾಯಕರು ಮಕ್ಕಳಿಗೆ ಸೂಕ್ತವಾದ ಸಮಯದಲ್ಲಿ ಚುಚ್ಚುಮದ್ದನ್ನು ನೀಡಿ ಅವರನ್ನು ರೋಗರುಜಿನಗಳಿಂದ ಪಾರುಮಾಡಬೇಕೆಂದು ಕರೆ ನೀಡಿದ್ದರು. ಇದಕ್ಕೆ ಉತ್ತಮ ಪ್ರತಿಕ್ರಿಯೆ ದೊರಕಿತೆಂದು ಮಾಧ್ಯಮಗಳಲ್ಲಿ ವರದಿಯಾಗಿದ್ದನ್ನು ನೆನಪಿಸಿಕೊಳ್ಳಬಹುದು. ಆಳವಾಗಿ ಬೇರು ಬಿಟ್ಟಿರುವ ಈ ಸಾಮಾಜಿಕ ಕೆಡುಕುಗಳನ್ನು ನಿವಾರಿಸಲು ನಿಷೇಧದಂತಹ ಕ್ರಮಗಳಿಂದ ಸಂಪೂರ್ಣವಾಗಿ ಸಾಧ್ಯವಾಗುವುದಿಲ್ಲ. ಅವುಗಳ ಹಿಂದಿರುವ ಪದ್ಧತಿಗಳು ಹಾಗೂ ಅವುಗಳಿಗಿರುವ ವಿವಿಧ ಆಯಾಮಗಳ ಬಗೆಗೆ ಸೂಕ್ಷ್ಮ ವಿಶ್ಲೇಷಣೆ ನಡೆಸಿ, ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳಬೇಕು.

ವಿಶ್ವಸಂಸ್ಥೆ ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆ ಮಾಡಿ ಅರವತ್ತು ವರ್ಷಗಳಾಗಿವೆ. ಸಂಸ್ಕೃತಿ, ಮಾನವ ಹಕ್ಕುಗಳ ಒಂದು ಭಾಗವಾಗಿರುವುದರಿಂದ, ಅದರ ಮೇಲೆ ವಿಶೇಷ ಒತ್ತನ್ನು ನೀಡಬೇಕಾಗಿರುವುದು ಇಂದಿನ ತುರ್ತು. ಸರ್ವ ಜನರ ಶಾಂತಿಯ ತೋಟವಾಗಿ ನಮ್ಮ ಸಮಾಜ ಪ್ರಗತಿಯ ಹಾದಿಯಲ್ಲಿ ಸಾಗಬೇಕಾದರೆ ಈ ನಿಟ್ಟಿನಲ್ಲಿ ತುಂಬು ಮನಸ್ಸಿನ ಪ್ರಯತ್ನಗಳಾಗಬೇಕು. ಇವುಗಳಿಂದ ಇತ್ಯಾತ್ಮಕ ಫಲಶ್ರುತಿಗಳಾದಾಗ ಮಾತ್ರ ನಾವು ಮಹಿಳೆಯರ ಮತ್ತು ಹೆಣ್ಣುಮಕ್ಕಳ ಸ್ಥಿತಿಗತಿಗಳಲ್ಲಿ ಪಲ್ಲಟಗಳನ್ನು ನಿರೀಕ್ಷಿಸಬಹುದು.

*(ನಾನಾ ಮೂಲಗಳ ಆಧಾರದಿಂದ)*

## ಸುರ-ಮ್ನ್-ರಾ

*ನೆದಾಲ್ ಅಬ್ಬಾಸ್*

ಶುಕ್ರವಾರ ಬೆಳಗ್ಗೆ
ಸುರ-ಮ್ನ್-ರಾದಲ್ಲಿ
ಕಾಣದ ಗುಂಡಿನ ಧಾಳಿಯಲ್ಲಿ
ಚೂರು ಚೂರಾಗಿ ಬಿದ್ದಿದ್ದಾನೆ
ಯುವಕನೊಬ್ಬ

ಕಪ್ಪು ಬುರ್ಖಾ ತೊಟ್ಟ
ಹೆಣ್ಣುಮಗಳು
ಪುಟ್ಟ ಕಂದನ ಕೈಹಿಡಿದು
ಪಕ್ಕದಲ್ಲೇ ನಡೆಯುತ್ತಾಳೆ

ಮಗು,
ದಿಟ್ಟಿಸುತ್ತದೆ ಛಿದ್ರ ದೇಹವನ್ನು
ಆಕಾಶಕ್ಕೆ ತೆರೆದ ಅಂಗೈಯನ್ನು
ಮುಟ್ಟುವಾಸೆಯಿಂದ
ಕೈಚಾಚುತ್ತದೆ
ಅದು ತನ್ನ ತಂದೆಯದೇ?

*ಅನು: ಎಂ.ಆರ್. ಕಮಲ*

ನೆದಾಲ್ ಅಬ್ಬಾಸ್ ಇರಾಕಿನ ಕವಯತ್ರಿ. ಅರೇಬಿಕ್ ಭಾಷೆಯಲ್ಲಿ ಅವಳ ಮೊದಲ ಕವನ ಸಂಗ್ರಹ 1999ರಲ್ಲಿ ಪ್ರಕಟವಾಯಿತು (ಡ್ರೀಮ್ಸ್ ಆಫ್ ಇನ್‌ವಿಸಿಬಲ್ ಪ್ಲೆಷರ್ಸ್)

ಸುರ-ಮ್ನ್-ರಾ(ನೋಡುಗನ ಅಚ್ಚರಿ): ಟೈಗ್ರಿಸ್‌ನ ಪೂರ್ವ ದಡದಲ್ಲಿರುವ 'ಸಮರಾ' ಪಟ್ಟಣದ ಹಳೆಯ ಹೆಸರು. ಬಾಗ್ದಾದ್‌ಗೆ 125 ಕಿಲೋಮೀಟರ್ ದೂರದಲ್ಲಿರುವ ಈ ಪಟ್ಟಣ 847ನೇ ಇಸವಿಯಲ್ಲಿ ನಿರ್ಮಿತವಾದ 'ಅದ್ಭುತ ಮಸೀದಿ'ಗೆ ಹೆಸರುವಾಸಿ. ಸಂಯುಕ್ತ ಸಂಸ್ಥಾನದ ಸೈನ್ಯದ ಧಾಳಿಯಲ್ಲಿ ನೂರಾರು ಜನರು ಬೀದಿಯಲ್ಲೇ ಹತ್ಯೆಗೊಂಡರು. ಅವರ ದೇಹಗಳನ್ನು ತೆಗೆದುಕೊಳ್ಳಲು ಜನರು ಭಯಪಟ್ಟಿದ್ದರಿಂದ ಅವು ರಸ್ತೆಗಳಲ್ಲಿಯೇ ಬಿದ್ದಿದ್ದವು.

# ಕವಿತಾಳ ದನಿ ನಮ್ಮೆಲ್ಲರಿಗೂ ಎಚ್ಚರದ ದನಿ

*ವೇದಿಕೆಯ ಮೇಲಿರುವ ಗಣ್ಯರೇ, ಇಲ್ಲಿ ನೆರೆದಿರುವ ಸಹೃದಯರೇ*

ಕವಿತಾ ಸ್ಮಾರಕ ಪ್ರಶಸ್ತಿಯನ್ನು ಮಾನಸ ಬಳಗಕ್ಕೆ ನೀಡಿರುವುದು ಹಾಗೂ ನಾನು ಮಾನಸ ಬಳಗದ ಪರವಾಗಿ ಈ ಪ್ರಶಸ್ತಿಯನ್ನು ಸ್ವೀಕರಿಸುತ್ತಿರುವುದು ಹಲವಾರು ಕಾರಣಗಳಿಂದ ಮುಖ್ಯವಾದ ಸಂಗತಿಯೆಂದು ನಾನು ಭಾವಿಸಿದ್ದೇನೆ. ಕಳೆದ ೨೪ ವರ್ಷಗಳಿಂದ ಅನೇಕ ಏಳು ಬೀಳುಗಳ ನಡುವೆಯೂ ಮಾನಸ ಪತ್ರಿಕೆಯನ್ನು ಪ್ರಕಟಿಸುತ್ತಾ ಬಂದಿದ್ದೇವೆ. ನಾವು ನಡೆದುಬಂದ ಹಾದಿಯಲ್ಲಿ ತಾವು ನೀಡುತ್ತಿರುವ ಕವಿತಾ ಸ್ಮಾರಕ ಪ್ರಶಸ್ತಿ ಒಂದು ದೊಡ್ಡ ಮೈಲಿಗಲ್ಲೆಂದು ಭಾವಿಸುತ್ತೇವೆ. ನಾಲ್ಕು ಗೋಡೆಯೊಳಗೆ ಸಾಕ್ಷಿಗಳಿಲ್ಲದೇ ಮರೆಯಾದ ಕವಿತಾಳ ದನಿ ನಮ್ಮೆಲ್ಲರ 'ಎಚ್ಚರ'ದ ಪ್ರಯತ್ನಗಳಲ್ಲಿ ಪುನಃ ಪುನಃ ಮಾರ್ದನಿಗೊಳ್ಳಲು ಈ ಪ್ರಶಸ್ತಿ ಪೂರಕವಾಗಲಿ ಹಾಗೂ ಪ್ರೇರಕ ಶಕ್ತಿಯಾಗಲಿ ಎಂಬುದು ನಮ್ಮೆಲ್ಲರ ಆಸೆ.

೧೯೮೫ರಲ್ಲಿ ಮಾನಸ ಪತ್ರಿಕೆಯನ್ನು ಹಾಗೂ ವೇದಿಕೆಯನ್ನು ಪ್ರಾರಂಭಿಸಲಾಯಿತು. ಆಗ ಮಹಿಳಾ ಚಳವಳಿಯ ಮುಂದೆ ಹಲವಾರು ಸವಾಲುಗಳಿದ್ದವು. ತುರ್ತು ಪರಿಸ್ಥಿತಿ ಸಂದರ್ಭದಲ್ಲಿ ಪ್ರಜಾಪ್ರಭುತ್ವದ ಹಕ್ಕುಗಳಿಗಾಗಿ ನಡೆದ ಹೋರಾಟಗಳ ಜೊತೆಜೊತೆಯಲ್ಲಿಯೇ ಮಹಿಳಾ ಚಳವಳಿಯಲ್ಲಿ ಸ್ವಾಯತ್ತ ಪರಿಕಲ್ಪನೆಯು ಮೂಡತೊಡಗಿತ್ತು, ಹಲವಾರು ಸೈದ್ಧಾಂತಿಕ ಗೊಂದಲಗಳು ಸಹ ನಮ್ಮ ಮುಂದಿದ್ದವು.

ಈ ನಿಟ್ಟಿನಲ್ಲಿ ನಾವು ಮಹಿಳಾ ಸಮಸ್ಯೆಯನ್ನು ಕೇವಲ ಖಾಸಗೀ ಸಮಸ್ಯೆಯೆಂದು ಪರಿಗಣಿಸದೇ ಈ ಸಮಸ್ಯೆಯ ಹಿಂದೆ ಒಂದು ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ವ್ಯವಸ್ಥೆಯಿದೆ ಎಂಬ ದೃಷ್ಟಿಕೋನದಿಂದ ಮಹಿಳಾ ಸಮಸ್ಯೆಗಳನ್ನು ವಿಶ್ಲೇಷಿಸತೊಡಗಿದೆವು. ಮಹಿಳೆಯರ ವೈಯಕ್ತಿಕ ಹಾಗೂ ಖಾಸಗೀ ಸಮಸ್ಯೆಗಳು ರಾಜಕೀಯ ಸ್ವರೂಪ ಹೊಂದಿದೆಯೆಂಬುದು ನಮ್ಮ ಗ್ರಹಿಕೆಯಾಗಿದೆ. ಪಿತೃಪ್ರಧಾನ ಅಥವಾ ಪುರುಷ ಪ್ರಧಾನವ್ಯವಸ್ಥೆಯು ಜಾತಿ, ವರ್ಗ, ಧರ್ಮ, ಆರ್ಥಿಕತೆ ಇವುಗಳೊಂದಿಗೆ ತಳುಕುಹಾಕಿಕೊಂಡು ಆಯಾಚಾರಿತ್ರಿಕ ಸಂದರ್ಭದಲ್ಲಿ ಹೊಸ ಹೊಸ ಸ್ವರೂಪಗಳನ್ನು ಪಡೆಯುತ್ತವೆ. ಆಯಾ ಚಾರಿತ್ರಿಕ ಸಂದರ್ಭದಲ್ಲಿ ಅವು ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡುತ್ತಿವೆ. ಹಾಗಾಗಿ ಮಹಿಳಾ ಸಮಸ್ಯೆಯನ್ನು ಪ್ರತ್ಯೇಕಿಸಿ ನೋಡಲಾಗುವುದಿಲ್ಲ. ಒಂದು ನೆಲೆಯಲ್ಲಿ ಮಹಿಳೆಯೆಂಬ ಕಾರಣಕ್ಕೆ ಸಂಘಟಿತರಾದರೂ ಮಹಿಳೆಯರು ಈ ವ್ಯವಸ್ಥೆಯಲ್ಲಿ ವಿಭಜಿತರಾಗಿದ್ದಾರೆ. ಬೆಳೆಯುತ್ತಿರುವ ಕೋಮುವಾದ ಹಾಗೂ ಜಾಗತೀಕರಣದ ಪ್ರಸ್ತುತ ಸಂದರ್ಭದಲ್ಲಿ ಮಹಿಳಾ ಸಮಸ್ಯೆಯನ್ನು ವಿಭಿನ್ನ ನೆಲೆ ಹಾಗೂ ದೃಷ್ಟಿಕೋನದಿಂದ ವಿಶ್ಲೇಷಿಸುವುದು ಅತ್ಯಗತ್ಯವಾಗಿದೆ. ಈ ದೃಷ್ಟಿಯಿಂದ ಮಹಿಳಾ ಚಳವಳಿ ಹಾಗೂ ಹೋರಾಟಕ್ಕೆ ಸ್ವಾಯತ್ತ ಪರಿಕಲ್ಪನೆ ಅನಿವಾರ್ಯವಾದ ಒಂದು ಆಯ್ಕೆಯಾಗಿದೆ.

ಮಾನಸ ಪತ್ರಿಕೆ ಹಾಗೂ ವೇದಿಕೆಯ ಚಟುವಟಿಕೆಗಳನ್ನು ಪ್ರಾರಂಭಿಸಿದಾಗ ಅನೇಕ ಸವಾಲುಗಳು ನಮ್ಮ ಮುಂದಿದ್ದವು. ನಮ್ಮ ಚಟುವಟಿಕೆಗಳಿಗೆ ಸರ್ಕಾರೀ ಅನುದಾನಗಳಾಗಲೀ, ವಿದೇಶಿ ಸಂಸ್ಥೆಯಿಂದಾಗಲೀ ಹಣವನ್ನು ತೆಗೆದುಕೊಳ್ಳಬಾರದೆಂಬ ತೀರ್ಮಾನವನ್ನು ನಾವು ತೆಗೆದುಕೊಂಡಿದ್ದೆವು. ಕಳೆದ ೨೪ ವರ್ಷಗಳಿಂದ ಓದುಗರು, ಸಹೃದಯರು, ಸಂಪಾದಕೀಯ ಮಂಡಳಿಯ ಸದಸ್ಯರುಗಳ ನೆರವಿನಿಂದ ಕಾರ್ಯ ನಿರ್ವಹಿಸುತ್ತಾ ಬಂದಿದ್ದೇವೆ. ವೇದಿಕೆಗೆ ಹಾಗೂ ಪತ್ರಿಕೆಯ ಪ್ರಕಟಣೆಗೆಂದು ಜನರಿಂದಲೇ ಸಂಗ್ರಹಿಸುವುದು ಒಂದು ರಾಜಕೀಯ ಚಟುವಟಿಕೆಯೆಂದು ಭಾವಿಸಿದ್ದೇವೆ. ಇಂದಿಗೂ ನಂಬಿಕೆ, ಬದ್ಧತೆ ಹಾಗೂ ಶ್ರಮವೇ ನಮ್ಮ ಮೂಲಬಂಡವಾಳವಾಗಿದೆ.

ಇನ್ನೊಂದು ಪ್ರಮುಖವಾದ 'ಶ್ರೇಣೀಕೃತ' ವ್ಯವಸ್ಥೆಯನ್ನು ಮುರಿಯುವ ಕಿರುಪ್ರಯತ್ನವನ್ನು ಹಾಗೂ ಪ್ರಯೋಗವನ್ನು ನಾವು ಮಾಡುತ್ತಾ ಬಂದಿದ್ದೇವೆ. ನಮ್ಮ ನಡುವಿರುವ ಶ್ರೇಣೀಕೃತ ವ್ಯವಸ್ಥೆಯನ್ನು, ಹಾಗೂ Individualist ಆದ ಧೋರಣೆಗಳನ್ನು challenge ಮಾಡುತ್ತಾ, ಪರ್ಯಾಯ ಪರಿಕಲ್ಪನೆಯಿಂದ (collective) ಸಾಂಘಿಕ ಆಲೋಚನೆಯನ್ನು ನಮ್ಮ ನಡುವೆ ಹುಟ್ಟುಹಾಕುವ ಪ್ರಯತ್ನವನ್ನು ಮಾಡುತ್ತಾ ಬಂದಿದ್ದೇವೆ. ಹಾಗಾಗಿ ಮಾನಸಕ್ಕೆ 'ಸಂಪಾದಕರು' ಕೇವಲ ತಾಂತ್ರಿಕ ಕಾರಣಕ್ಕಾಗಿ ಮಾತ್ರ, ಪತ್ರಿಕೆಯ ಸಂಪೂರ್ಣ ಜವಾಬ್ದಾರಿ ಇಡೀ ಮಾನಸ ಬಳಗದ್ದೇ ಆಗಿದೆ. ಸಂಪಾದಕೀಯ ಮಂಡಳಿಯ ಎಲ್ಲ ಸದಸ್ಯರೂ ಲೇಖನಗಳನ್ನು, ಸಂಪಾದಕೀಯವನ್ನು ಚರ್ಚಿಸಿ ತೀರ್ಮಾನಿಸುತ್ತಾರೆ. ಬರೆಯುವುದು, ಲೇಖನಗಳನ್ನು ಲೇಖಕ ಲೇಖಕಿಯರಿಂದ ಬರೆಸುವುದು ಮುಂತಾದ ಕೆಲಸಗಳ ಜೊತೆ ಜೊತೆಯಲ್ಲಿಯೇ ತಾಂತ್ರಿಕ ಕೆಲಸಗಳನ್ನೂ ಸಮಾನವಾಗಿ ಹಂಚಿಕೊಂಡು ಮಾಡುತ್ತಾ ಬಂದಿದ್ದೇವೆ.

ಹಿಂದೆ, ಮುದ್ರಣದ ಮೊಳೆಯನ್ನು ಜೋಡಿಸುತ್ತಾ ನಮ್ಮದೇ ಒಂದು ಪುಟ್ಟ ಮುದ್ರಣ ಘಟಕವನ್ನು ಹೊಂದಿದ್ದೆವು. ಬೆಂಗಳೂರು ಸುಲ್ತಾನ್‌ಪೇಟೆಯಿಂದ ಪೇಪರ್ ಹೊತ್ತು ತಂದಿರುವುದು, ಲೇಖನಗಳಿಗೆ ಮೊಳೆ ಜೋಡಿಸುವುದು, ತೂಕದ ಪ್ಲೇಟನ್ನು (ಚೆಸ್) ಮುದ್ರಣಾಲಯಕ್ಕೆ ತೆಗೆದುಕೊಂಡು ಹೋಗಿರುವುದು, ಮುದ್ರಣವಾದ ಹಾಳೆಗಳನ್ನು ಒಟ್ಟಿಗೆ ಕುಳಿತು ಜೋಡಿಸಿರುವುದು, ಪಿನ್‌ಮಾಡಿ ಮೈದಾಹಿಟ್ಟಿನ ಅಂಟಿನಲ್ಲಿ ಮುಖಪುಟವನ್ನು ಅಂಟಿಸಿರುವುದು, ವಿಳಾಸಗಳನ್ನು ಬರೆದು ಅಂಚೆ ಕಛೇರಿಗೆ ಹೊತ್ತು ತೆಗೆದು ಕೊಂಡು ಹೋಗಿದ್ದು, ಈ ಕ್ಷಣ ಕ್ಷಣದ ಅನುಭವವೂ ನಮಗೆ ಹೊಸ ಒಳನೋಟಗಳನ್ನು ನೀಡಿದೆ. ಈ ಮೂಲಕ ಸಮಾನತೆಯ ಪರಿಕಲ್ಪನೆಯನ್ನು ನಮ್ಮ ನಡುವೆ ಬೆಳೆಸಿಕೊಳ್ಳಲು ಹಾಗೂ ಶ್ರಮ ಸಂಸ್ಕೃತಿಯ ಘನತೆಯನ್ನು ಎತ್ತಿಹಿಡಿಯಲು ಪ್ರಯತ್ನಿಸುತ್ತಾ ಬಂದಿದ್ದೇವೆ. ನಮ್ಮ ಈ ಸಾಂಘಿಕಯತ್ನ ನಮ್ಮ ನಡುವೆಯೇ ಇರುವ ಸಾಮಾಜಿಕ ವ್ಯತ್ಯಾಸಗಳ ಗೆರೆಯನ್ನು ಅಳಿಸಲು ಪೂರಕವಾಗಿದೆ.

೧೯೮೫ರಲ್ಲಿ 'ಮಾನಸಿ' ಎಂಬ ಹೆಸರಿನಲ್ಲಿ ಪತ್ರಿಕೆ ಪ್ರಕಟವಾಯಿತು. ೧೯೮೬ರಲ್ಲಿ ತಾಂತ್ರಿಕ ಕಾರಣದಿಂದ 'ಮಾನಸ' ತಿಂಗಳ ಪತ್ರಿಕೆಯೆಂಬ ಹೆಸರಿಂದ ಹಾಗೂ ೨೦೦ರಲ್ಲಿ ಪುನಃ ತಾಂತ್ರಿಕ ಕಾರಣದಿಂದ 'ನಮ್ಮ ಮಾನಸ' ಎಂಬ ಹೆಸರಿನಿಂದ ಪ್ರಕಟಿಸುತ್ತಾ ಬಂದಿದ್ದೇವೆ.

**ಮಾನಸದಲ್ಲಿ**

* ಮಹಿಳೆಯರಿಗೆ ಸಂಬಂಧಪಟ್ಟ ಲೇಖನ, ವರದಿ, ವಿಶ್ಲೇಷಣೆ, ವಿಮರ್ಶೆ, ಕವನ ಮುಂತಾದವುಗಳನ್ನು ಪ್ರಕಟಿಸುತ್ತಾ ಬಂದಿದ್ದೇವೆ.
* ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯೇಕವಾಗಿ ಪರೋಕ್ಷವಾಗಿ ಮಹಿಳೆಯರ

## ಮಾನಸ ಬಳಗಕ್ಕೆ ಕವಿತಾ ಸ್ಮಾರಕ ಪ್ರಶಸ್ತಿ



'ಕವಿತಾ'ಳ ಸಾವಿನ ನೆನಪನ್ನು ವಿಶಿಷ್ಟವಾಗಿ ಹಾಗೂ ಅರ್ಥಪೂರ್ಣವಾಗಿಸುವ ದೃಷ್ಟಿಯಿಂದ ಶ್ರೀಮತಿ ಯಶೋದಾ ರಾಗೌ ಟ್ರಸ್ಟ್ ಇವರು ಪ್ರತಿವರ್ಷ ವಿಶಿಷ್ಟ ಸಾಧನೆಗೈದ ಮಹಿಳೆಯರಿಗೆ ಕವಿತಾ ಸ್ಮಾರಕ ಪ್ರಶಸ್ತಿಯನ್ನು ನೀಡುತ್ತಿರುವುದು ವೈಯಕ್ತಿಕ ನೋಟವನ್ನು ಸಮಾಜೀಕರಿಸುತ್ತಿರುವುದಕ್ಕೆ ಒಂದು ನಿದರ್ಶನವಾಗಿದೆ. ಪ್ರಶಸ್ತಿ ನೀಡುವುದರ ಜೊತೆಗೆ, ಮಹಿಳೆಯರಿಗೆ ಸಂಬಂಧಪಟ್ಟ ವಿಷಯಗಳನ್ನು ಕುರಿತು ಉಪನ್ಯಾಸವನ್ನು ಏರ್ಪಡಿಸಿ ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲಾಗುತ್ತದೆ. ದಿನಾಂಕ 24–7–09ರಂದು ಹಮ್ಮಿಕೊಳ್ಳಲಾದ ಈ ಪ್ರಶಸ್ತಿಯನ್ನು ಈ ಬಾರಿ 'ನಮ್ಮ ಮಾನಸ ಬಳಗ'ಕ್ಕೆ ನೀಡಲಾಯಿತು. ಪ್ರಶಸ್ತಿ ನೀಡಿ ಪುಸ್ತಕವನ್ನು ಬಿಡುಗಡೆ ಮಾಡಿದ ಕರ್ನಾಟಕ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿಗಳಾದ ಪ್ರೊ. ಎಸ್. ರಾಮೇಗೌಡರು ಮಾತನಾಡುತ್ತಾ, "ಬದಲಾಗುತ್ತಿರುವ ಇಂದಿನ ಸಮಾಜದಲ್ಲಿ ಮಹಿಳೆಯರು ಎಲ್ಲ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದಾರೆ. ಎಲ್ಲ ಕೆಲಸಗಳನ್ನು ನಿಭಾಯಿಸುವ ಸಾಮರ್ಥ್ಯ ಮಹಿಳೆಯರಿಗಿದೆ. ಪುರುಷರು ತಮ್ಮ ಸಾಂಪ್ರದಾಯಿಕ ಧೋರಣೆಗಳನ್ನು ಬಿಟ್ಟು ಮಹಿಳೆಯರಿಗೆ ಅವಕಾಶ ನೀಡಿ ಪ್ರೋತ್ಸಾಹಿಸುವುದು ಅತ್ಯಗತ್ಯವಾಗಿದೆ" ಎಂದರು. ಡಾ॥ ಅಕ್ಕಮಹಾದೇವಿಯವರು 'ದಲಿತ ಮಹಿಳೆ' ಕುರಿತು ಸ್ಮಾರಕ ಉಪನ್ಯಾಸ ನೀಡಿದರು. ಮೈಸೂರು ವಿಶ್ವವಿದ್ಯಾಲಯದ ಕುಲಪತಿಗಳಾದ ಪ್ರೊ. ವಿ.ಜಿ. ತಳವಾರ್‌ರವರು ಅಧ್ಯಕ್ಷತೆ ವಹಿಸಿದ್ದರು. 'ನಮ್ಮ ಮಾನಸ ಬಳಗ'ದ ಸದಸ್ಯರೆಲ್ಲರು ವೇದಿಕೆಯಲ್ಲಿದ್ದು ಪ್ರಶಸ್ತಿಯನ್ನು ಸ್ವೀಕರಿಸಿದರು. ಪ್ರೊ. ಶಿವರಾಮ ಕಾಡನಕುಪ್ಪೆಯವರು ಆಪ್ತವಾಗುವಂಥ ಶೈಲಿಯಲ್ಲಿ ಸ್ವಾಗತಿಸಿದರು.

---

ಬದುಕಿನ ಮೇಲೆ ಪರಿಣಾಮಬೀರುವ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ವಿಚಾರಗಳಿಗೆ ಆದ್ಯತೆ ನೀಡಲಾಗಿದೆ.

* ವಿವಾಹ, ಕುಟುಂಬ, ಸಾಮಾಜಿಕ ಸಂಸ್ಥೆಗಳು, ವರದಕ್ಷಿಣೆ, ಮನೆಗೆಲಸ, ವೇತನ ರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಲಿಂಗ ಸ್ತ್ರೀವಾದಿ ಸಾಹಿತ್ಯವಿಮರ್ಶೆ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸುತ್ತಾ ಬಂದಿದ್ದೇವೆ.
* ಆರೋಗ್ಯ, ಲೈಂಗಿಕತೆ, ಅಪಾಯಕಾರಿ ಗರ್ಭ ನಿರೋಧಕರಗಳು, ಅಭಿವೃದ್ಧಿ ಯೋಜನೆಗಳು ಇಂತಹ ವಿಷಯಗಳನ್ನು ಚರ್ಚೆಗೆ ಒಳಪಡಿಸಲಾಗಿದೆ.
* ಅಣ್ವಸ್ತ್ರೀಕರಣ ಮಿಲಿಟರೀಕರಣ ಜಾಗತೀಕರಣದಂತಹ ಬೆಳವಣಿಗೆಯನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸುತ್ತಾ ಬಂದಿದ್ದೇವೆ.
* ಇತರ ಪ್ರಜಾಸತ್ತಾತ್ಮಕ ಸಂಘಟನೆಗಳೊಂದಿಗೆ ಕೋಮುವಾದ, ಮೀಸಲಾತಿ, ಪೌರಕಾರ್ಮಿಕರ ಸಮಸ್ಯೆ, ಸಮಾನ ನಾಗರಿಕ ಸಂಹಿತೆ, ಲೈಂಗಿಕ ಅಲ್ಪಸಂಖ್ಯಾತರು, ಸ್ಥಳಾಂತರ, ಗಾರ್ಮೆಂಟ್ ಕಾರ್ಮಿಕ ಹೋರಾಟ ಮುಂತಾದ ಎಲ್ಲ ಬಗೆಯ ಹೋರಾಟಗಳೊಂದಿಗೆ ಕೈ ಜೋಡಿಸುತ್ತಾ ಬಂದಿದ್ದೇವೆ.
* ಸ್ವಸಹಾಯಸಂಘಗಳನ್ನು ರಚಿಸುವುದರ ಮೂಲಕ ಮಹಿಳೆಯರ ಆರ್ಥಿಕ ಸಬಲತೆಗೆ ಪ್ರೋತ್ಸಾಹಿಸುತ್ತಾ ಬಂದಿದ್ದೇವೆ.
* ಕೌಟುಂಬಿಕ ಹಿಂಸೆ, ದೌರ್ಜನ್ಯಗಳಿಗೊಳಗಾದ ಮಹಿಳೆಯರಿಗೆ ನೆರವು ನೀಡುವುದು ಹಾಗೂ ಪುಸ್ತಕ ಪ್ರಕಾಶನ ಹೀಗೆ ಮಾನಸ ವೇದಿಕೆ ತನ್ನ ಚಟುವಟಿಕೆಗಳನ್ನು ವಿಸ್ತರಿಸುತ್ತಾ ಬಂದಿದೆ.
* ಪತ್ರಿಕೆ ಅನೇಕ ಮಹಿಳೆಯರನ್ನು ಹಾಗೂ ಪುರುಷರನ್ನು ಬರೆಯುವಂತೆ ಪ್ರೇರಿಸಿದೆ. ತಮ್ಮೊಳಗೆ ಮಡುವಾಗಿದ್ದ ನೋವು, ಸಿಟ್ಟು, ಅವಮಾನ ಹಾಗೂ ಕನಸುಗಳನ್ನು ಬರವಣಿಗೆಯ ಸ್ವರೂಪದಲ್ಲಿ ತರಲು ವೇದಿಕೆಯನ್ನು ಒದಗಿಸಿದೆ. ಮಹಿಳಾ ಚಳವಳಿಗೆ ಸಂಬಂಧಪಟ್ಟ ಹಲವಾರು ವಿಚಾರಗಳನ್ನು ಗಂಭೀರ ಚರ್ಚೆಗೆ ಒಳಪಡಿಸಿದ್ದೇವೆ.

ನಾವು ಆಯ್ಕೆ ಮಾಡಿಕೊಂಡ ಹಾದಿ, ವೈಚಾರಿಕ ಸಿದ್ಧಾಂತಗಳು ಸುಂದರವಾಗಿ ಕಂಡರೂ ಅವುಗಳನ್ನು ಕೃತಿಯ ರೂಪದಲ್ಲಿರಿಸುವುದು ನಂಬಿಕೆಯಷ್ಟು ಸುಲಭವಾಗಿಲ್ಲ. ಸ್ವಾಯತ್ತ ಪರಿಕಲ್ಪನೆ ಹಾಗೂ ಸಾಂಘಿಕ ಪ್ರಯೋಗ ಕೆಲವೊಮ್ಮೆ ನಮ್ಮನ್ನು ಹತಾಶೆಯಿಂದ ಕೈಚೆಲ್ಲಿ ಕೂಡುವಂತೆ

ಸಹ ಮಾಡಿದೆ. ಇಂದು ಮಾನಸಕ್ಕೆ ಒಂದು ಕಛೇರಿ ಇಲ್ಲ, ಟೆಲಿಫೋನ್ ಸೌಲಭ್ಯವಿಲ್ಲ, ಯಾವುದೇ Bank balance ಇಲ್ಲ, ಪೂರ್ಣ ಪ್ರಮಾಣದಲ್ಲಿ ಕೆಲಸ ಮಾಡುವ ಕಾರ್ಯಕರ್ತರಿಲ್ಲ. ಪತ್ರಿಕೆಯ ಹಾಗೂ ವೇದಿಕೆಯ ಚಟುವಟಿಕೆಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಮಾನಸ ಸದಸ್ಯರ ಮನೆಗಳಲ್ಲಿ ನಡೆಸುತ್ತೇವೆ. ಪತ್ರಿಕೆಗೆ ಹಣದ ಕೊರತೆಯಿದ್ದಾಗ ಮಾನಸ ಬಳಗದ ಸದಸ್ಯರೇ ಸಮಾನವಾಗಿ ಹಂಚಿಕೊಂಡಿದ್ದೇವೆ. ಪ್ರತಿ ತಿಂಗಳೂ ನಮ್ಮ ವೇತನದಲ್ಲಿ ಮಾನಸಕ್ಕೆ ನಿರ್ದಿಷ್ಟ ಮೊತ್ತವನ್ನು ನೀಡಿದ್ದೇವೆ. ಕೆಲವೊಮ್ಮೆ ಸಾಲ ತಂದು ಪತ್ರಿಕೆಯನ್ನು ಪ್ರಕಟಿಸಿದ್ದೇವೆ. ಈ ಮಾತನ್ನು ಇಲ್ಲಿ ಹೇಳುವುದಕ್ಕೆ ಮುಖ್ಯ ಕಾರಣ, ಮಾನಸವನ್ನು ನಾವು ಸಾಂಸ್ಥೀಕರಣಗೊಳಿಸುವ ಎಲ್ಲ ಪ್ರಯತ್ನವನ್ನು ನಿರಾಕರಿಸುತ್ತಾ ಬಂದಿದ್ದೇವೆ ಎಂದು ಸ್ಪಷ್ಟಪಡಿಸಲು. ಯಾವುದೇ ಪ್ರಗತಿಪರ ಚಳವಳಿ ಸಾಂಸ್ಥೀಕರಣಗೊಂಡಾಗ ಅದರೊಳಗೆ ವ್ಯಕ್ತಿಗತ ಹಿತಾಸಕ್ತಿಗಳು, ಅಥವಾ ಇತರ ಹಿತಾಸಕ್ತಿಗಳು ನುಸುಳಿ ಬಿಡುತ್ತವೆ. ನಾವು ನಮ್ಮ ಉದ್ದೇಶಗಳಿಗಾಗಿ ಹೋರಾಡುವುದನ್ನು ಮರೆತು, ಕೊನೆಗೆ ಇಂತಹ ಸ್ವಾರ್ಥ, ಹಿತಾಸಕ್ತಿಗಳ ವಿರುದ್ಧ ಹೋರಾಡುವುದೇ ಮುಖ್ಯವಾಗಿ ಬಿಡುತ್ತದೆ. ಇಂದು ಪ್ರಗತಿಪರ ಚಳವಳಿಗಳು, ದಲಿತಚಳವಳಿ, ರೈತಚಳವಳಿಗಳು ಹಾಗೂ ಮಹಿಳಾ ಚಳವಳಿಗಳು ಹರಿದು ಹಂಚಿಹೋಗುತ್ತಿವೆ. ಈ ದೃಷ್ಟಿಯಿಂದ ಮಾನಸದ ಈ ವಿಚಾರಗಳನ್ನು ಹೇಳುತ್ತಿದ್ದೇನೆ. ಈ ಪ್ರಯೋಗ ಒಂದು ಹೋರಾಟದ ಹಾದಿಯೇ ಆಗಿದೆ. ಸಂಘರ್ಷ, ಕಹಿಭಾವನೆ, ಭಿನ್ನಾಭಿಪ್ರಾಯಗಳೂ ನಮ್ಮ ಜೊತೆಜೊತೆಗೆ ನಡೆದು ಬಂದಿವೆ. ನಮ್ಮ ಕನಸನ್ನು ಸಾಕಾರಗೊಳಿಸಿ, ಪತ್ರಿಕೆಯನ್ನು ಬೆಳಸಿದವರಿದ್ದಾರೆ; ಬಿಟ್ಟು ಹೋದವರಿದ್ದಾರೆ; ಬಿಟ್ಟು ಹೋಗಿದ್ದರೂ ನಮ್ಮೊಂದಿಗಿದ್ದಾರೆ; ಹೊಸಬರು ಸೇರಿದ್ದಾರೆ; ಹೆಚ್ಚು ಕೆಲಸ ಮಾಡುವವರಿದ್ದಾರೆ; ಕಡಿಮೆ ಕೆಲಸ ಮಾಡುವರಿದ್ದಾರೆ. ಕೆಲವು ಸಂದರ್ಭದಲ್ಲಿ ಸಕ್ರಿಯರಾದವರಿದ್ದಾರೆ; ಕೆಲವೊಮ್ಮೆ ಮಂದಗತಿಯಲ್ಲಿ ಜವಾಬ್ದಾರಿಗಳನ್ನು ಹಂಚಿಕೊಂಡವರಿದ್ದಾರೆ. ಇನ್ನು ಸಾಧ್ಯವಿಲ್ಲ ಎಂಬಂತಹ ಹತಾಶೆಯ ಸಂದರ್ಭದಲ್ಲಿ ಒತ್ತಾಸೆಯಾಗಿ, ಬೆನ್ನೆಲುಬಾಗಿ, ಪತ್ರಿಕೆಯನ್ನು ಜೀವಂತವಿರಿಸಿದವರಿದ್ದಾರೆ. ನಾವಿದ್ದೇವೆ ಮುಂದುವರಿಸಿ ಎಂದು ಹುರಿದುಂಬಿಸಿದವರಿದ್ದಾರೆ. ಸಹೃದಯ ಓದುಗರ ಬೆಂಬಲ ಮಾನಸಕ್ಕೆ ಸದಾ ಇದೆ. ಮಾನಸದೊಂದಿಗಿನ ಇವರ ಸಂಬಂಧ ಅಂತರಂಗದಲ್ಲೊಂದು ಹರಿಯುತ್ತಿರುವ ನಿರಂತರ ನದಿಯಾಗಿದೆ. ಮಾನಸ ಫೀನಿಕ್ಸ್‌ನಂತೆ ಪುನಃ ಪುನಃ ಜೀವಂತಿಕೆಯನ್ನು ಪಡೆಯುತ್ತದೆ.

ಪ್ರಚಾರ, ವೈಭವೀಕರಣ, ವೈಯಕ್ತಿಕ ಲಾಭ ಮುಂತಾದವುಗಳಿಂದ ಮಾನಸ ಬಲುದೂರ. ಹಾಗಾಗಿ ಮಾನಸ ಯಾವುದೇ ಪ್ರಶಸ್ತಿಯನ್ನು ಸ್ವೀಕರಿಸುವಾಗ ಪ್ರಶಸ್ತಿ ನೀಡುವವರ ತಾತ್ವಿಕ ನಿಲುವಿನ ಬಗ್ಗೆ ವಿವರವಾಗಿ ಚರ್ಚಿಸಿ ತೀರ್ಮಾನ ತೆಗೆದುಕೊಳ್ಳುತ್ತದೆ. ಇತ್ತೀಚೆಗೆ ನೀಡಲಾದ 'ಪಾಪ್ಯುಲೇಶನ್ ಫಸ್ಟ್'ನ ಮಾಧ್ಯಮ ಪ್ರಶಸ್ತಿಯನ್ನು ಆ ಸಂಸ್ಥೆಯ ಬಗ್ಗೆ ಇದ್ದ ತಾತ್ವಿಕ ಭಿನ್ನಾಭಿಪ್ರಾಯದಿಂದಾಗಿ ಗೌರವಯುತವಾಗಿ ಹಾಗೂ ವಿನಯದಿಂದ ನಿರಾಕರಿಸಿದ್ದೆವು. ಆದರೆ ಕವಿತಾ ಸ್ಮಾರಕ ಟ್ರಸ್ಟ್ ವತಿಯಿಂದ ನೀಡುತ್ತಿರುವ ಈ ಪ್ರಶಸ್ತಿಯು ನಮ್ಮ ನಂಬಿಕೆಗೆ ಸಿದ್ಧಾಂತಕ್ಕೆ ಪತ್ರಿಕೆಗೆ ಹಾಗೂ ವೇದಿಕೆಯ ಚಟುವಟಿಕೆಗೆ ನೀಡಿದ ಅತ್ಯಂತ ಗೌರವಾನ್ವಿತ ಪ್ರಶಸ್ತಿಯೆಂದು ವಿನಯದಿಂದ ಹಾಗೂ ನಮ್ರತೆಯಿಂದ ಸ್ವೀಕರಿಸಿದ್ದೇವೆ. ಇದು ನಮ್ಮ ಮಾನಸ ಬಳಗಕ್ಕೆ ಸಂದ ವೈಯಕ್ತಿಕ ಗೌರವವಷ್ಟೇ ಅಲ್ಲ, ಬದುಕುವ ಹಕ್ಕಿಗಾಗಿ ಹೋರಾಡುತ್ತಿರುವ ಪ್ರತಿಯೊಬ್ಬ ಮಹಿಳೆಗೂ ಸಂದ ಗೌರವವೆಂದು ನಾವು ಭಾವಿಸಿದ್ದೇವೆ.

ನಮಸ್ಕಾರ

**• *ಎಚ್.ಎಸ್. ರಾಜೇಶ್ವರಿ***

('ಕವಿತಾ ಸ್ಮಾರಕ ಪ್ರಶಸ್ತಿ'ಯನ್ನು 'ನಮ್ಮ ಮಾನಸ' ಪರವಾಗಿ ಸ್ವೀಕರಿಸಿದ ಸಂದರ್ಭದಲ್ಲಿ ಮಂಡಿತವಾದ ಅಭಿಪ್ರಾಯಗಳು)





*ಇಳಾ ಪ್ರಕಾಶನ ಹಾಗೂ ಮಾನಸ ಸಂಯುಕ್ತವಾಗಿ ದಿನಾಂಕ ೧೭-೦೭-೨೦೦೯ ರಂದು ಡಾ॥ ಬಿ.ಎನ್. ಸುಮಿತ್ರಾಬಾಯಿಯವರ 'ಸರಹದ್ದುಗಳ ಆಚೆ-ಈಚೆ' ಕೃತಿಯ ಅನಾವರಣ ಕಾರ್ಯಕ್ರಮವನ್ನು ನಯನ ಸಭಾಂಗಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಡಾ॥ ಯು.ಆರ್. ಅನಂತಮೂರ್ತಿಯವರು ಪುಸ್ತಕ ಬಿಡುಗಡೆ ಮಾಡಿದರು. ಡಾ॥ ವನಮಾಲ ವಿಶ್ವನಾಥ್‌ರವರು ಪುಸ್ತಕವನ್ನು ಕುರಿತು ಮಾತನಾಡಿದರು. ಪ್ರೊ॥ ಎಂ.ಎಚ್. ಕೃಷ್ಣಯ್ಯನವರು ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ ಶ್ರೀಮತಿ ವೈದೇಹಿ ಅವರ ಕೃತಿ ಆಧಾರಿತ 'ಅಲೆಗಳಲ್ಲಿ ಅಂತರಂಗ' ನಾಟಕದ ಏಕವ್ಯಕ್ತಿ ಪ್ರಸ್ತುತಿಯನ್ನು ಕೃಷ್ಣಮೂರ್ತಿ ಕವತ್ತಾರ್‌ರವರ ನಿರ್ದೇಶನದಲ್ಲಿ ಸೀತಾಕೋಟೆಯವರು ಸಾದರಪಡಿಸಿದರು.*

*'ಸರಹದ್ದುಗಳ ಆಚೆ-ಈಚೆ' ಪುಸ್ತಕದ ಬೆಲೆ ರೂ. ೧೨೦/-.*

*ಪ್ರತಿಗಳಿಗಾಗಿ ಸಂಪರ್ಕಿಸಿ : ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ., ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧.*
*ದೂರವಾಣಿ : ೨೨೨೦೩೫೮೦, ೩೦೫೭೮೦೨೨*



# ವರದಕ್ಷಿಣೆಯ ಕಬಂಧ ಬಾಹು

● ವಿದ್ಯಾ ಎಸ್. ನಾಯಕ್

ಪುರುಷೋತ್ತಮ (ಹೆಸರು ಬದಲಾಯಿಸಲಾಗಿದೆ) ಸ್ಪುರದ್ರೂಪಿ ಹುಡುಗ, ಶಿವಳ್ಳಿ ಬ್ರಾಹ್ಮಣ. ವೃತ್ತಿಯಲ್ಲಿ ಕೃಷಿಕ. ಅನುಕೂಲಸ್ಥರು, ಹಳ್ಳಿಯಲ್ಲಿ ವಾಸ. ಕಳೆದ 8–10 ವರ್ಷಗಳಿಂದ ವಿವಾಹವಾಗಲು ಹೆಣ್ಣು ಹುಡುಕುತ್ತಿದ್ದಾರೆ. ಅದಕ್ಕಾಗಿ ರಾಜ್ಯಾದಂತವಿರುವ ವಿವಾಹ ವೇದಿಕೆಯಲ್ಲಿ ಹೆಸರು ನೋಂದಾಯಿಸಿ ಪ್ರಯತ್ನಿಸುತ್ತಿದ್ದಾರೆ. ಅನಾಥಾಶ್ರಮಕ್ಕೂ ತಡಕಾಡಿದ್ದಾರೆ. ಆದರೆ ಹೆಣ್ಣು ಸಿಗುತ್ತಿಲ್ಲ. ಹಳ್ಳಿವಾಸ, ಕೃಷಿಕ, ಹೆತ್ತವರೊಂದಿಗೆ ವಾಸ ಈ ಎಲ್ಲಾ ಕಾರಣಕ್ಕೆ ತಿರಸ್ಕೃತನಾಗುತ್ತಿದ್ದಾರೆ. ಇದು ಪುರುಷೋತ್ತಮನೊಬ್ಬನ ವ್ಯಥೆಯಲ್ಲ. ಇಂದು ಈ ಪ್ರಶ್ನೆ ಗಂಡು ಹೆತ್ತ ಪ್ರತಿಯೊಬ್ಬ ತಂದೆ–ತಾಯಿಯರ ಸಮಸ್ಯೆಯಾಗಿದೆ. ವಧು–ವರರ ನೋಂದಣಿ ಕಛೇರಿಗಳಲ್ಲೂ ಕೃಷಿಕ, ಅರ್ಚಕ, ಅಡುಗೆಯವರಿಗೆ ಹೆಣ್ಣಿನ ಜಾತಕ ಲಭ್ಯವಿಲ್ಲ ಎಂಬ ಫಲಕವನ್ನೇ ಹಾಕಿದೆಯಂತೆ! ಬ್ರಾಹ್ಮಣರಲ್ಲಿ ಒಳಪಂಗಡಗಳಲ್ಲಿ ವಿವಾಹ ಈಗ ಸರ್ವೇಸಾಮಾನ್ಯವಾಗಿದೆ. ಮಠಾಧಿಪತಿಗಳು ಅನ್ಯಜಾತೀಯ ಹೆಣ್ಮಕ್ಕಳನ್ನು ಬ್ರಾಹ್ಮಣೀಕರಿಸಿ ವಿವಾಹ ಆಗಲು ಸಮ್ಮತಿಸುತ್ತಿದ್ದಾರೆ. (ಅಂತಹ ಮದುವೆಗಳು ನಡೆದಿವೆ.) ಇದೊಂದು ಸಾಮಾಜಿಕ ಕ್ರಾಂತಿ, ಪರಿವರ್ತನೆ ಎಂದು ಮೇಲ್ನೋಟಕ್ಕೆ ಅನ್ನಿಸಿದರೂ ವರದಕ್ಷಿಣೆ ನೀಡಲು ಸಾಧ್ಯವಿಲ್ಲದ ಬಡ ಹೆಣ್ಣು ಮಕ್ಕಳು ವಿವಾಹವಾಗಿ ತವರಿನ ಸಂಪರ್ಕವಿಲ್ಲದೆ ಬಾಳುವ ಬದುಕು ಎಷ್ಟೊಂದು ದುರ್ಭರ. ಇದೊಂದು ಅಮಾನವೀಯ, ಶೋಷಣೆ ಅಲ್ಲವೇ? ಇದೇಕೆ ಹೀಗಾಯ್ತು? ಇದರ ಬಗ್ಗೆ ನಾವೆಲ್ಲರೂ ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ.

ದ.ಕ.ಜಿಲ್ಲೆ ಮಾತೃಪ್ರಧಾನ ವ್ಯವಸ್ಥೆಯಲ್ಲಿರುವ ಜಿಲ್ಲೆ. ಇಲ್ಲಿ 1000 : 1100 ಹೆಣ್ಮಕ್ಕಳ ಅನುಪಾತವಿತ್ತು. ಆದರೆ ಇಂದು 100 : 952ಕ್ಕೆ ಇಳಿಕೆಯಾಗಿದೆ. ಆರ್ಥಿಕವಾಗಿ ಶೈಕ್ಷಣಿಕವಾಗಿ ಸಾಮಾಜಿಕವಾಗಿ ಅತ್ಯಂತ ಮುಂದುವರಿದ ಈ ಜಿಲ್ಲೆಯಲ್ಲಿ ಇದೇಕೆ ಹೀಗಾಯ್ತು? ವರದಕ್ಷಿಣೆ ಮತ್ತು ಭ್ರೂಣಹತ್ಯೆಯ ಪರಿಣಾಮವೇ?

ಇಂದು ವಿವಾಹಗಳು ಬಹಳಷ್ಟು ಅದ್ದೂರಿಯಲ್ಲಿ ನಡೆಯುತ್ತವೆ. 70ರ ದಶಕದ ಬಳಿಕ ವಿವಾಹ ವಿಧಿಗಳು ಸರಳಗೊಂಡು ಒಂದು ದಿನದೊಳಗೆ ವಿವಾಹ ನಡೆದುಹೋಗುತ್ತಿತ್ತು. ಇಂದು ನಿಶ್ಚಿತಾರ್ಥವೇ ಮದುವೆಯಂತೆ ನಡೆಯುತ್ತಿದೆ. ಬಳಿಕ ಹಿಂದಿನ ಸಂಜೆ ದಿಬ್ಬಣ ಬರಮಾಡಿಕೊಂಡು ರಸಮಂಜರಿ ಕಾರ್ಯಕ್ರಮ, ಕೆಲವು ಶಾಸ್ತ್ರ ಮಾಡುತ್ತಾರೆ. ಮತ್ತೆ ಔತಣ ಮರುದಿನ ಮದುವೆ. ಮದುವೆಯಲ್ಲೂ ಸಾಂಪ್ರದಾಯಿಕ ಅಡುಗೆ ಮಾಯವಾಗಿದೆ. ಉತ್ತರ ಭಾರತ/ದಕ್ಷಿಣ ಭಾರತ ಶೈಲಿಯ ಊಟ, ಐಸ್‌ಕ್ರೀಂ, ಫ್ರೂಟ್‌ಸಲಾಡ್ ಜತೆಯಲ್ಲಿ sweet pocket ಅನ್ನು ಸ್ಪೀಲ್ ಡಬ್ಬದಲ್ಲಿ ನೀಡುವ ವ್ಯವಸ್ಥೆ, ನೀರಿನ ಬಾಟಲ್ ಈ ರೀತಿ ವೈಭವೋಪೇತ ವಿವಾಹ. ಹಾಗಂತ ನಮ್ಮಲ್ಲಿ ವರದಕ್ಷಿಣೆ ಇದೆಯೇ? ಅಂದರೆ, ಕೂಡಲೇ 'ಇಲ್ಲ' ಎಂಬ ಉತ್ತರ ಬರುತ್ತದೆ. ಹಾಗಾದರೆ ವರದಕ್ಷಿಣೆ ಎಂದರೇನು?

ಈ ಎಲ್ಲಾ ಖರ್ಚನ್ನೂ ಹೆಣ್ಣಿನ ಕಡೆಯವರೇ ಭರಿಸಬೇಕಾಗುತ್ತದೆ. ವಿವಾಹ ಸಂದರ್ಭದಲ್ಲಿ ಕನಿಷ್ಠ 25 ಪವನ್ ಚಿನ್ನ, ವಜ್ರದ ಬೆಂಡೋಲೆ, ವಜ್ರದುಂಗುರ ನೀಡದಿದ್ದಲ್ಲಿ ಹೇಗೆ? ಎಂದು ಹೆಣ್ಣು ಹೆತ್ತವರು ಯೋಚಿಸತೊಡಗಿದ್ದಾರೆ. ಜಿ.ಎಸ್.ಬಿ. ಸಮುದಾಯದಲ್ಲಿ ಹವಳದ ಮಂಗಳಸೂತ್ರ, 3 ರೇಷ್ಮೆ ಸೀರೆ ಮತ್ತು 2 ಸಾಮಾನ್ಯ ಸೀರೆ ಗಂಡಿನ ಕಡೆಯವರು ತರಬೇಕಾದದ್ದು ಕ್ರಮ. ಆದರೆ ಇಂದು ವಿವಾಹದ 2–3 ದಿನ ಮೊದಲು ಅದನ್ನೆಲ್ಲಾ ಗಂಡಿನ ಮನೆಗೆ ಕಳುಹಿಸಿಕೊಡಬೇಕು. ಅದನ್ನು ವಿವಾಹ ದಿನದಂದು ಗಂಡಿನ ಕಡೆಯವರು ತಂದು ಹೆಣ್ಣಿಗೆ ನೀಡುತ್ತಾರೆ. ಇದನ್ನು ವರದಕ್ಷಿಣೆಯೆಂದು ಯಾರೂ ಪರಿಗಣಿಸುವುದಿಲ್ಲ. ಹಾಗಿದ್ದಲ್ಲಿ 'ಮಾಂಗಲ್ಯ'ಕ್ಕೆ ಎಲ್ಲಿದೆ ಪಾವಿತ್ರ್ಯ? ಇಂದಿನ ಪೀಳಿಗೆಗೆ ಅದು ಅವರ ಜವಬ್ದಾರಿಯೆಂದು ಕೂಡ ತಿಳಿಯದಷ್ಟು ಈ ಸಂಪ್ರದಾಯ ಹೆಣ್ಣಿನ ಮನೆಯವರಲ್ಲಿ ಅಂತರ್ಗತವಾಗಿಬಿಟ್ಟಿದೆ. ಹಿಂದೆ ಮದುವೆಯ ದಿಬ್ಬಣದ ಖರ್ಚು, ಮಾಂಗಲ್ಯ, ಸೀರೆ, ಎಲ್ಲವನ್ನು ಗಂಡಿನ ಕಡೆಯವರು ತರುತ್ತಿದ್ದರು. ಹೆಣ್ಣಿನ ಕಡೆಯವರಿಗೆ ಮದುವೆ ಹೊರೆಯಾಗಿರಲಿಲ್ಲ. ಗಂಡುಮಕ್ಕಳು ಹೆಚ್ಚು ವಿದ್ಯಾವಂತರಾದಂತೆ ಬೇಡಿಕೆಯೂ ಹೆಚ್ಚಾಯಿತು. ವಿದ್ಯಾವಂತ ನೌಕರಿಯಲ್ಲಿರುವ ಹೆಣ್ಮಕ್ಕಳಿಗೆ ಬೇಡಿಕೆ ಬಂತು. ನೌಕರಿಯಲ್ಲಿಲ್ಲದ ಹೆಣ್ಣು ಮಕ್ಕಳನ್ನು ವರದಕ್ಷಿಣೆ ನೀಡಿ ವಿವಾಹ ಮಾಡಿಕೊಡಲಾಗುತ್ತಿತ್ತು. ಇಂದು ಹೆಣ್ಣು ಮಕ್ಕಳೆಲ್ಲ ವಿದ್ಯಾವಂತರಾಗಿ IT, BT ಕ್ಷೇತ್ರದಲ್ಲಿ ಉದ್ಯೋಗಸ್ಥರಾಗಿ ತಮ್ಮ ಸಂಗಾತಿಯ ಆಯ್ಕೆಯಲ್ಲಿ ನಿರ್ಧಾರ ತೆಗೆದುಕೊಳ್ಳುವ ಸ್ಥಿತಿಗೆ ಬಂದಿದ್ದಾರೆ. ತಮ್ಮ carrier ಬಗ್ಗೆ ಹೆಣ್ಣುಮಕ್ಕಳು ಜಾಗೃತರಾಗಿದ್ದಾರೆ. ಹಾಗಿದ್ದರೂ ವೈಭವೋಪೇತ ವಿವಾಹ, ಚಿನ್ನಾಭರಣ ನೀಡಿಕೆಯಲ್ಲಿ ಯಾವುದೇ ಬದಲಾವಣೆಯಾಗಿಲ್ಲ. ಬದಲಾಗಿ ಕಾರು, ಹನಿಮೂನ್‌ಗೆ ವಿದೇಶ ಪ್ರಯಾಣ ಪ್ಯಾಕೇಜ್‌ಗಳು ಸೇರ್ಪಡೆಯಾಗುತ್ತಿವೆ. ಜಾಗತೀಕರಣ, ಸರಕೀಕರಣದ ಪ್ರಭಾವ ನಮ್ಮ ಸಂಪ್ರದಾಯ, ಜೀವನಶೈಲಿ ಎಲ್ಲವನ್ನೂ ತನ್ನ ಕಬಂಧ ಬಾಹುವಿನಲ್ಲಿ ಬಾಚಿಕೊಂಡಿದೆ. ಇಷ್ಟೆಲ್ಲ ವೈಭವದಿಂದ ವಿವಾಹಗಳು ನಡೆದರೂ ವಿಚ್ಛೇದನಗಳೂ ಹೆಚ್ಚೆಚ್ಚು ಆಗುತ್ತಿವೆ. ಹಾಗಾಗಿ ಪ್ರತಿಯೊಬ್ಬರೂ ಈ ನಿಟ್ಟಿನಲ್ಲಿ ಗಂಭೀರವಾಗಿ ಚಿಂತಿಸಬೇಕಾಗಿದೆ.

ಈ ವರದಕ್ಷಿಣೆ ಪಿಡುಗು ಎಲ್ಲಾ ಜಾತಿ ಸಮುದಾಯಕ್ಕೂ ವ್ಯಾಪಿಸುತ್ತಿದೆ. ದಲಿತರಲ್ಲೂ ಇಂದು ವಿದ್ಯಾವಂತರು ತಮ್ಮ ಕೂಡುಗಟ್ಟಳೆ ವಿವಾಹ ವಿಧಾನವನ್ನು ಬಿಟ್ಟು ಮೇಲ್ಜಾತಿಯ ವಿವಾಹ ಕ್ರಮದ ಅನುಕರಣೆ, ಅದ್ದೂರಿಯ ವಿವಾಹ, ವರದಕ್ಷಿಣೆ ಬೇಡಿಕೆ ಇಡುತ್ತಿದ್ದಾರೆ. ಮುಸ್ಲಿಂ ಸಮುದಾಯದಲ್ಲೂ ವರದಕ್ಷಿಣೆಗಾಗಿಯೇ 3–4 ವಿವಾಹವಾಗುವುದನ್ನು ಕಾಣುತ್ತೇವೆ. ಇನ್ನೊಂದೆಡೆ ಪ್ರೀತಿ, ಪ್ರೇಮದ ನಾಟಕವಾಡಿ ಹೆಣ್ಣಿನೊಂದಿಗೆ ದೈಹಿಕ ಸಂಬಂಧ ನಡೆಸಿ ಬಳಿಕ ಮದುವೆಗೆ ನಿರಾಕರಿಸುವ ಪ್ರಕರಣಗಳು ಹೆಚ್ಚುತ್ತಿವೆ. ಇದಕ್ಕೆ ಕಾರಣ ವರದಕ್ಷಿಣೆ. ಪ್ರೇಮವಿವಾಹದಲ್ಲಿ ವರದಕ್ಷಿಣೆ ಹೊರೆಯಿಲ್ಲ ಎಂಬ ಭ್ರಮೆಯಿಂದ ಮರುಳಾಗುವ ಹೆಣ್ಣು ಮಕ್ಕಳು ಮತ್ತೆ ಅದೇ ಶೂಲಕ್ಕೆ ಬಲಿಯಾಗುತ್ತಿರುವುದು ವಿಪರ್ಯಾಸ.

ಸರಕಾರದ ಅಭಿವೃದ್ಧಿ ಯೋಜನೆಗಳು ಮದುವೆಯನ್ನು ಸಾಂಸ್ಥೀಕರಣಗೊಳಿಸುತ್ತಿವೆ. ಉದಾ: ಭಾಗ್ಯಲಕ್ಷ್ಮೀಯೋಜನೆ. ಈ ಯೋಜನೆ ಅತ್ಯಾಚಾರಕ್ಕೆ ಬಲಿಯಾಗಿ ಹುಟ್ಟಿದ ಹೆಣ್ಣು ಮಗುವಿಗೆ, ಅವಿವಾಹಿತ ಹೆಣ್ಣಿಗೆ ಹುಟ್ಟಿದ ಹೆಣ್ಣು ಮಗುವಿಗೆ ಅನ್ವಯವಾಗುವುದಿಲ್ಲ. ಅಂತಹ ಮಕ್ಕಳಿಗೆ ಯೋಜನೆಯನ್ನು ವಿಸ್ತರಿಸಿದಲ್ಲಿ ಅನೈತಿಕತೆಗೆ ಪ್ರೋತ್ಸಾಹಿಸಿದಂತಾಗುತ್ತದೆ ಎಂದು ಉತ್ತರಿಸುವ ಅಧಿಕಾರ ವರ್ಗಕ್ಕೆ ಮಗುವನ್ನು ಹಡೆದು ಬೆಳೆಸುವುದು ಎಷ್ಟೊಂದು ಕಷ್ಟಕರ, ಸರಕಾರದ 10 ಸಾವಿರ ಬುಜಬಿ ಹಣಕ್ಕೆ ಯಾರೂ ಅಂತಹ ಕೃತ್ಯಕ್ಕೆ ತೊಡಗುವುದಿಲ್ಲ, ಅವರೆಲ್ಲ ಪರಿಸ್ಥಿತಿಯ 'ಬಲಿಪಶು'ಗಳು ಎಂದು ಯೋಚಿಸುವ ಅಂತಃಕರಣವಿಲ್ಲದಿರುವುದು ದುರದೃಷ್ಟಕರ.

ಹಾಗೆಯೇ 7ನೇ ತರಗತಿವರೆಗೆ ಕಲಿತ ಮುಸ್ಲಿಂ ಹೆಣ್ಣು ಮಕ್ಕಳಿಗೆ ವಿವಾಹಕ್ಕೆ ರೂ. 5000/– ಸಹಾಯಧನ ಯೋಜನೆ, ಕೆಲವೊಂದು Insurence scheme ಇವೆಲ್ಲವೂ ವರದಕ್ಷಿಣೆಗೆ ಪರೋಕ್ಷವಾಗಿ ಪ್ರೋತ್ಸಾಹವೇ ಆಗಿದೆ. ಈ ಎಲ್ಲಾ ನಿಟ್ಟಿನಲ್ಲಿ ಪ್ರಜ್ಞಾವಂತರೆಲ್ಲರೂ ಆತ್ಮಾವಲೋಕನ ಮಾಡಬೇಕಾಗಿದೆ. ಕಾನೂನುಗಳಿಂದ ಬದಲಾವಣೆ ಸಾಧ್ಯವಿಲ್ಲ. ನಮ್ಮಲ್ಲಿ ಆತ್ಮಗೌರವ, ಸ್ವಾಭಿಮಾನ, ಹೆಣ್ಣನ್ನು ಗೌರವಿಸುವ ಮನೋಭಾವ, ಸಮಾನತೆ ರೂಪುಗೊಳ್ಳಬೇಕಾಗಿದೆ. ❑

*Edited, Printed, Published and owned by Rajeshwari H.S., No. 114/5, 9th Cross, 2nd Main, Chamarajpet, Bangalore - 560 018.*
*Printed at ILA Mudrana, No. 36, 40 Ft. Road, Raghavanagara, New Timberyard Layout, Bangalore - 560 026.*
*Published at No. 114/5, 9th Cross, 2nd Main, Chamarajpet, Bangalore - 560 018. Editor : Rajeshwari H.S.*

# ಕರ್ನಾಟಕ ಉತ್ಕೃಷ್ಟ ಕಲೆ, ಸಾಹಿತ್ಯ, ಸಂಸ್ಕೃತಿ.......ಗಳ ಬೀಡು

*ಸಾವಿರಾರು ವರ್ಷಗಳ ಶ್ರೇಷ್ಠ ಸಂಸ್ಕೃತಿ, ಶ್ರೀಮಂತ ಕಲೆ, ಅನುಪಮ ಸಾಹಿತ್ಯ ಭಂಡಾರ ಹೊಂದಿರುವ ಕರ್ನಾಟಕದ ವೈಭವವನ್ನು ದೇಶದ ಉದ್ದಗಲಕ್ಕೂ ಮೆರೆಸಿದ ಹಿರಿಮೆ ಕನ್ನಡಿಗರದು. ಸಾಮಾಜಿಕ ಸಮಾನತೆ, ಹೃದಯ ವೈಶಾಲ್ಯತೆಯ ಮೂಲಸೆಲೆಯಲ್ಲಿ ಮೂಡಿಬಂದ ಈ ನಾಡಿನ ವಚನ ಸಾಹಿತ್ಯ ಮತ್ತು ದಾಸ ಸಾಹಿತ್ಯಗಳು ಸದಾ ಪ್ರಸ್ತುತ. ಅವು ಮನುಕುಲಕ್ಕೆ ನೀಡಿದ ಅಭೂತಪೂರ್ವ ಕೊಡುಗೆಗಳು.*

*ದೇಶದ ಕಲೆ, ಸಾಹಿತ್ಯ, ಕ್ರೀಡೆ, ವಿಜ್ಞಾನ, ತಂತ್ರಜ್ಞಾನಗಳಂತಹ ಮಹತ್ತರ ರಂಗಗಳಲ್ಲಿ ಮಹೋನ್ನತ ಕಾಣಿಕೆ ನೀಡಿದ ಕರ್ನಾಟಕವನ್ನು ಮತ್ತಷ್ಟು ಸಮೃದ್ಧಗೊಳಿಸಬೇಕೆಂಬುದೇ ಸರ್ಕಾರದ ದೃಢಸಂಕಲ್ಪ. ಪ್ರಾದೇಶಿಕ ಅಸಮತೋಲನ ನಿವಾರಣೆಗೆ ಒತ್ತು ನೀಡಿರುವ ಸರ್ಕಾರ ಉತ್ತರ ಕರ್ನಾಟಕದ ಸರ್ವಾಂಗೀಣ ಅಭಿವೃದ್ಧಿಗೆ ಪ್ರಾಶಸ್ತ್ಯ ನೀಡಿ ಕಾರ್ಯ ಪ್ರವೃತ್ತವಾಗಿದೆ.*


ಕರ್ನಾಟಕ ವಾರ್ತೆ

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09

## ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕ ಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆ ಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳ ಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದ ಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆ ಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆ ಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸ ಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at Chamarajpet Post Office*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018